# ರೆವರೆಂಡ್. ಎಫ್. ಕಿಟೆಲ್



ಎಸ್.ಕೆ. ಹಾವನೂರ್

ಕಿಟೆಲ್ ಮೆಮೋರಿಯಲ್ ಕಾಲೇಜಿಗೆ

— ಶ್ರೀ. ಹಾ.




# ರೆವರೆಂಡ್ ಎಫ್. ಕಿಟೆಲ್

ಡಾ॥ ಶ್ರೀನಿವಾಸ ಕೆ. ಹಾವನೂರ



ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ
ನೃಪತುಂಗ ರಸ್ತೆ
ಬೆಂಗಳೂರು-೫೬೦ ೦೦೨

ಡಾ. ಶ್ರೀನಿವಾಸ ಕೆ. ಹಾವನೂರ ಅವರಿಂದ ರಚಿಸಲ್ಪಟ್ಟ 'ರೆವರೆಂಡ್ ಎಫ್. ಕಿಟೆಲ್' ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದವರಿಂದ ಪ್ರಥಮ ವಿಶ್ವ ಕನ್ನಡ ಸಮ್ಮೇಳನದ ಸಂದರ್ಭದಲ್ಲಿ (ಜನವರಿ ೧೯೮೩) ಐಬಿಎಚ್ ಪ್ರಕಾಶನದವರ ಕೃಪೆಯಿಂದ ಪ್ರಕಟಿಸಲ್ಪಟ್ಟಿದ್ದು.

REVEREND F. KITTEL—a life sketch of F. Kittel by Dr. Srinivasa K. Havanura and Published by The Directorate of Kannada and Culture, Government of Karnataka, 14/3A Nrupathunga Road, Bangalore-560 002 on the occasion of the *FIRST WORLD KANNADA CONFERENCE (January 1983)* by the Courtesy of IBH Prakashana, Gandhinagar, Bangalore-560 009



ಬೆಲೆ ರೂ. ೨-೦೦

ಚಿತ್ರಗಳು : ಮನಮೋಹನ್

ಮುದ್ರಕರು : ಎಚ್. ಎಸ್. ಎನ್. ರಾವ್ ಐಬಿಎಚ್ ಪ್ರಕಾಶನ ಪ್ರಿಂಟರಿ
ಬೆಂಗಳೂರು-೫೬೦ ೦೦೯

ಯಾವುದಾದರೂ ಕನ್ನಡ ಶಬ್ದದ, ವಿಶೇಷತಃ ಹಳೆಯ ಶಬ್ದಗಳ ಅರ್ಥವನ್ನು ತಿಳಿದುಕೊಳ್ಳಬೇಕಾದರೆ ಕಿಟೆಲ್ ಕೋಶವನ್ನು ನೋಡುವುದು ರೂಢಿಯಾಗಿ ಬಿಟ್ಟಿದೆ. ವಿದ್ಯಾರ್ಥಿಗಳಿಂದ ಮೊದಲುಗೊಂಡು ದೊಡ್ಡ ದೊಡ್ಡ ಪಂಡಿತರವರೆಗೂ ಕಿಟೆಲ್ ಕೋಶವೇ ಆಧಾರ. ಕನ್ನಡೇತರರಿಗೂ ಈ ಮಹಾನ್ ಶಬ್ದ ಕೋಶವು ನೆರವಾಗಬಲ್ಲುದು.

ಯಾರು ಈ ಕಿಟೆಲ್ ? ಯಾವುದೊ ಪಂಡಿತ ಮನೆತನದಲ್ಲಿ ಜನಿಸಿದವ, ಇಲ್ಲವೆ ನಮ್ಮ ವಿಶ್ವವಿದ್ಯಾನಿಲಯವೊಂದರಲ್ಲಿ ಕನ್ನಡದ ಹಿರಿಯ 'ಪ್ರೊಫೆಸರ್' ಇದ್ದನೇನು ? ಇಲ್ಲ ; ಆತ ಕನ್ನಡ ದೇಶದವನೇ ಅಲ್ಲ ! ಅವನು ದೂರದ ಜರ್ಮನ್ ದೇಶದವನು. ಕಳೆದ ಶತಮಾನದಲ್ಲಿ ಕನ್ನಡನಾಡಿಗೆ ಬಂದು, ಮಂಗಳೂರು, ಧಾರವಾಡ, ಮಡಿಕೇರಿಗಳಲ್ಲಿ ನೆಲೆಸಿದನು. ಕ್ರಿಸ್ತಮತ ಪ್ರಸಾರ ಮಾಡುವ ಸಲುವಾಗಿ ಆತ ಇಲ್ಲಿಗೆ ಬಂದನು. ಆದರೆ ಕನ್ನಡವನ್ನು ವಿಶೇಷವಾಗಿ ಕಲಿಯುಬಯಸಿದನು. ಮುಂದೆ, ಆ ಒಂದು ಶತಮಾನದಲ್ಲಿ ಯಾವ ಕನ್ನಡ ವಿದ್ವಾಂಸನಿಗೂ ಕಡಿಮೆಯಲ್ಲದಷ್ಟು ಆಳವಾಗಿ ಅಭ್ಯಾಸ ಮಾಡಿದನು. ಅನೇಕ ಕನ್ನಡ ಗ್ರಂಥಗಳನ್ನು ರಚಿಸಿದನು. ಅವುಗಳಲ್ಲೆಲ್ಲ ಎದ್ದುಕಾಣುವಂತಹುದು ಈ ಕನ್ನಡ ಕೋಶ. ಕನ್ನಡ ಭಾಷೆ ಜೀವಂತವಿರುವವರೆಗೂ ಉಳಿಯಬಲ್ಲ ಗ್ರಂಥವಿದು.

ಕಿಟೆಲ್ ಜರ್ಮನ್ ದೇಶದವ–ಎಂದೆವು. ಆ ದೇಶಕ್ಕೂ ಭಾರತಕ್ಕೂ ಬಹು ಕಾಲದ ನಂಟು. ಆ ದೇಶದ ವಿದ್ವಾಂಸರು ಭಾರತೀಯ ಶಾಸ್ತ್ರ, ಸಾಹಿತ್ಯ, ಸಂಸ್ಕೃತಿಗಳನ್ನು ಬಹಳವಾಗಿ ಮೆಚ್ಚಿದವರು. ಅನೇಕ ಶತಮಾನಗಳಿಂದ ನಡೆದು ಬಂದ ಪರಂಪರೆ

ಯಿದು. ಅಲ್ಲಿಯ ಹಲವು ವಿಶ್ವವಿದ್ಯಾನಿಲಯುಗಳಲ್ಲಿ ಅವೆಷ್ಟೋ
ಸಂಸ್ಕೃತ ಹಸ್ತಪ್ರತಿಗಳಿವೆ. ಭಾರತದ ಆದಿ ಮಹಾಕಾವ್ಯವೆನಿಸಿದ
ರಾಮಾಯಣದ ಲಭ್ಯವಿರುವ ಮೊತ್ತಮೊದಲಿನ ಹಸ್ತಪ್ರತಿಯು
ನಮ್ಮ ದೇಶದಲ್ಲಿಲ್ಲ ; ಜರ್ಮನಿಯ ಬಾನ್ ವಿಶ್ವವಿದ್ಯಾಲಯದಲ್ಲಿ
ಇದೆ ! ಸಂಸ್ಕೃತ ಭಾಷೆಯನ್ನೂ ಹಿಂದೂಧರ್ಮವನ್ನೂ ಕಲಿಸು
ವುದಕ್ಕೆಂದು ಅಲ್ಲಿಯ ಕೆಲವು ವಿಶ್ವವಿದ್ಯಾನಿಲಯುಗಳಲ್ಲಿ ಇಂದಿಗೂ
ವ್ಯವಸ್ಥೆಯಿದೆ. ಗಯಟೆ ಎಂಬ ಜರ್ಮನ್ ಕವಿ–ತತ್ವಜ್ಞಾನಿಯು
ಕಾಳಿದಾಸನ ಸುಪ್ರಸಿದ್ಧ ಶಾಕುಂತಲ ನಾಟಕವನ್ನು ಓದಿ ಮುಗಿಸಿ
"ಆಹಾ ! ಎಂಥ ದಿವ್ಯ ಕಾವ್ಯವಿದು !" ಎನ್ನುತ್ತ, ತನ್ನ ತಲೆಯ
ಮೇಲಿರಿಸಿಕೊಂಡು ಕುಣಿದಾಡಿದನಂತೆ ! ಮ್ಯಾಕ್ಸ್‌ಮುಲ್ಲರ್
ಎಂಬ ವಿದ್ವಾಂಸನು ಭಾರತೀಯ ತತ್ವ ವಿಚಾರಗಳನ್ನು ಚೆನ್ನಾಗಿ
ಅರಿತುಕೊಂಡು ವೇದ ಮುಂತಾದವುಗಳನ್ನು ಇಂಗ್ಲಿಷಿಗೆ ಭಾಷಾಂತ
ರಿಸಿದ್ದಾನೆ.

ಇತ್ತ ಬಾಸೆಲ್ ಮಿಶನ್ ಸಂಸ್ಥೆಯ ಮೂಲಕ ಜರ್ಮನರು
ಕನ್ನಡಕ್ಕೂ ಸೇವೆ ಸಲ್ಲಿಸಿದ್ದಾರೆ. ಆ ಸಂಸ್ಥೆಯ ಮಿಶನರಿಯಾದ
ವೀಗಲ್ ಎಂಬವನು ಮೊತ್ತಮೊದಲಿಗೆ ಕನ್ನಡ ಭಾಷೆಯ ಹಾಗೂ
ಸಾಹಿತ್ಯದ ಚರಿತ್ರೆಯನ್ನು, ಅದೂ ಜರ್ಮನ್ ಭಾಷೆಯಲ್ಲಿ ಬರೆ
ದಿದ್ದಾನೆ (೧೮೪೪). ದಾಸರ ಪದಗಳನ್ನು ಸಹ ಆ ಭಾಷೆಯಲ್ಲಿ
ಪ್ರಕಟಿಸಿದವರಿದ್ದಾರೆ.

ಆ ದೇಶದ ಉತ್ತರದಿಕ್ಕಿಗೆ ಇದ್ದ ಫ್ರೀಸ್‌ಲ್ಯಾಂಡ್ ಜಿಲ್ಲೆಯ
ಸಮುದ್ರ ತೀರದಲ್ಲಿ ರೆಸ್ಟರ್‌ಹಾಫ್ ಎಂಬ ಊರು ಇದೆ. ಅಲ್ಲಿ
ಗಾಟ್‌ಫ್ರಿಡ್‌ಕಿಟೆಲ್ ಎಂಬ ಮತೋಪದೇಶಕನು (ಕ್ಲರ್ಜಿ) ವಾಸ
ವಾಗಿದ್ದನು. ಅವನ ಪತ್ನಿಯ ಹೆಸರು ಹೆಲೆನ್. ಈ ದಂಪತಿಗಳಿಗೆ
೬ ಜನ ಮಕ್ಕಳು. ನಮ್ಮ ಚರಿತ್ರನಾಯಕನಾದ ಫರ್ಡಿನಾಂಡ್
ಕಿಟೆಲ್ ಅವರಲ್ಲಿ ಹಿರಿಯನು (ಜನನ : ೭ ಏಪ್ರಿಲ್ ೧೮೩೨)

ಟುಟ್ಟೂರಿನಲ್ಲಿ ಪ್ರಾಥಮಿಕ ಶಿಕ್ಷಣವನ್ನು ಮುಗಿಸಿ, ಫರ್ಡಿನಾಂಡನು
ಮುಂದಿನ ವಿದ್ಯಾಭ್ಯಾಸಕ್ಕೆಂದು ನೆರೆಯ ಜಿಲ್ಲೆಯಾದ ಈಸ್ಟ್
ಪ್ರಜಿಯಾದಲ್ಲಿರುವ ಔರಿಕ್ ಎಂಬ ನಗರಕ್ಕೆ ಬಂದನು (ಕ್ರಿ. ಶ.
೮೪೧). ಅದಕ್ಕೆ ಕಾರಣ ಅವನ ಅಜ್ಜ ಅಲ್ಲಿ ವಾಸವಾಗಿದ್ದುದು.
ಗಿನ ಮಾಧ್ಯಮಿಕ ಶಿಕ್ಷಣದ ವೈಶಿಷ್ಟ್ಯವೆಂದರೆ–ವಿದ್ಯಾರ್ಥಿಗಳು
ವಿಧ ಭಾಷೆಗಳನ್ನು ಕಲಿಯಬೇಕು ; ಆ ಮೂಲಕ ಆ ಭಾಷೆಗಳ
ಯ ಕಾವ್ಯ ಹಾಗೂ ಇತರ ಪುರಾತನ ಗ್ರಂಥಗಳನ್ನು ಅಭ್ಯಾಸ
ಾಡಬೇಕು. ಫರ್ಡಿನಾಂಡನು ಮಾತೃಭಾಷೆಯಾದ ಜರ್ಮನ್
ಜೊತೆಗೆ, ಲ್ಯಾಟಿನ್, ಗ್ರೀಕ್, ಹಿಬ್ರೂ, ಫ್ರೆಂಚ್ ಮತ್ತು ಇಂಗ್ಲಿಷ್
ಾಷೆಗಳನ್ನು ಕಲಿತನು. ವಿಶೇಷತಃ ಪ್ರಾಚೀನವಾದ ಲ್ಯಾಟಿನ್,
ರೀಕ್ ಭಾಷೆಗಳ ಕಾವ್ಯ ಗ್ರಂಥಗಳನ್ನು ಆಸ್ಥೆಯಿಂದ ಅಭ್ಯಾಸ
ಾಡಿದನು. ಅವನ ಮುಂದಿನ ಜೀವನದಲ್ಲಿ ಇದು ತುಂಬಾ
ಪ್ರಯೋಜನಕಾರಿಯಾಯಿತು.

ಈ ವೇಳೆಗೆ, ಅವನ ಕೆಲವು ವಿಶಿಷ್ಟ ಸ್ವಭಾವ-ಗುಣಗಳು
ವ್ಯಕ್ತವಾಗ ತೊಡಗಿದುವು. ಆತನು ಅತೀವ ಸಜ್ಜನನೂ ಶಾಂತ
ಭಾವದವನೂ ಆಗಿದ್ದನು. ವ್ಯರ್ಥವಾದ, ಅನವಶ್ಯಕವಾದ
ಾತುಕತೆ ಅವನಿಗೆ ಸೇರುತ್ತಿದ್ದಿಲ್ಲ. ಅವನು ಮೋಜುಮಾಡುವ
ಥವಾ ಐಷಾರಾಮ ವೃತ್ತಿಯವನಾಗಿರಲಿಲ್ಲ. ದೇವರ ವಿಷಯ
ಲ್ಲಿ ಅವನಿಗೆ ಆಗಲೇ ಭಕ್ತಿಭಾವ ಮೂಡಿದ್ದಿತು. ಅದರಿಂದಾಗಿ
ಲವು ದೇವರ ಸ್ತೋತ್ರಗಳನ್ನು ಆತ ತನ್ನ ಎಳೆಯ ವಯಸ್ಸಿ
ಲ್ಲಿಯೇ ರಚಿಸುವಂತಾಯ್ತು.

ಯುರೋಪು ಖಂಡದ ಪುರಾತನ ಕಾವ್ಯಗಳಲ್ಲಿ ಅದ್ಭುತ,
ರ್ಯ ಘಟನೆಗಳೇ ಹೆಚ್ಚಾಗಿ ಇದ್ದು, ಎಳವರೆಯದ ಅಂದರೆ
–೧೮ ವರ್ಷದ ಹುಡುಗರಿಗೆ ಅವು ಬಲು ರುಚಿಕರ. ಫರ್ಡಿ
ಂಡನು ಈ ಕಾವ್ಯಗಳ ಅರ್ಥವನ್ನೇನೊ ಚೆನ್ನಾಗಿ ತಿಳಿದು

ಕೊಂಡಿದ್ದ. ಆದರೆ ಅವು ಅವನಿಗೆ ಅಷ್ಟೊಂದು ಹಿಡಿಸಿರಲಿಲ್ಲ. ಇವುಗಳ ವಾಚನದಿಂದ ಅದಾವ ಪ್ರಯೋಜನ ?–ಎಂಬುದಾಗಿ ಅವನು ಭಾವಿಸಿದ್ದನು. ಇದಕ್ಕೆ ಬದಲಾಗಿ, ದೇವರ ಮೇಲಿನ ಭಕ್ತಿ, ಬೈಬಲ್ ಪಠಣ, ಕ್ರಿಸ್ತನ ಜೀವನ ವೃತ್ತ–ಇವು ಅವನ ಮನಸ್ಸಿಗೆ ನೆಮ್ಮದಿಯನ್ನು ಕೊಡುವಂಥವಾಗಿದ್ದುವು.

ಫರ್ಡಿನಾಂಡನಿಗೆ ಆಗ ೧೭ ವರ್ಷ ಪ್ರಾಯ. ಉಚ್ಚ ಶಿಕ್ಷಣದ ೫ನೆಯ ವರ್ಗದಲ್ಲಿ ಉತ್ತೀರ್ಣನಾಗಿ ಮುಂದಿನ ವರ್ಗದಲ್ಲಿ ಕಲಿಯುತ್ತಿದ್ದನು. ಇನ್ನೂ ೩–೪ ವರ್ಷ ಅವನು ಹೆಚ್ಚಿನ ಶಿಕ್ಷಣವನ್ನು ಪಡೆಯುವುದಿದ್ದಿತು. ಆಗ ಅವನು ಶಾಲೆಯನ್ನು ಬಿಡಲು ನಿರ್ಧರಿಸಿದನು ! ಹಾಗೆಂದು ಅರ್ಜಿಯನ್ನು ಸಲ್ಲಿಸಿದಾಗ, ಮುಖ್ಯ



ಧ್ಯಾಪಕರಾಗಿದ್ದ ರೊತ್‌ಹಾರ್ಟ್ ಅವರಿಗೆ ಅಚ್ಚರಿ. 'ಶಾಲೆಯಲ್ಲಿ
ಅವನ ಪ್ರಗತಿ ಚೆನ್ನಾಗಿದೆ ; ಉಡಾಳನೂ ಅಲ್ಲ. ಶಾಲೆಯನ್ನು
ಬಿಡುವುದೇಕೆ ?' ಎಂದು ಯೋಚಿಸಿದರು. ಅವನನ್ನು ಕರೆಯಿಸಿ
ವಿಚಾರಿಸಿದರು ; ಅವನ ಧಾರ್ಮಿಕ ಶ್ರದ್ಧೆಯ ಆಳವನ್ನು
ಅರಿತರು. ಅವನಿಗೆ ಅದೇ ಮಾರ್ಗ ಸರಿಯೆಂದು ಆಗ ಅವರಿಗೆ
ನಿಚಿತವಾಯಿತು.

ಆ ಮೊದಲು ಅವನ ತಂದೆ–ತಾಯಿ, ಅಜ್ಜಂದಿರು ಅವ
ನನ್ನು ಸೈನ್ಯ ಖಾತೆಗೆ ಸೇರಿಸಬೇಕೆಂದಿದ್ದರು. ಆದರೆ ಫರ್ಡಿನಾಂಡ
ನಿಗೆ ಬಾಲ್ಯದಿಂದಲೂ ತುಸು ದೃಷ್ಟಿಮಾಂದ್ಯವಿದ್ದಿತು. ಆದ್ದರಿಂದ
ಆ ವಿಚಾರವನ್ನು ಬಿಟ್ಟುಕೊಡಬೇಕಾಯಿತು. ಅವರಿಗೂ ತಮ್ಮ
ಚಿರಂಜೀವಿಯ ಧಾರ್ಮಿಕ ಮನೋವೃತ್ತಿಯ ಅರಿವಾಗಿದ್ದಿತು.
ಆಗ ಗುರುಹಿರಿಯರು ಸೇರಿ ಮಹತ್ವದ ನಿರ್ಧಾರ ಕೈಗೊಂಡರು.
ಬಾಸೆಲ್ ನಗರದಲ್ಲಿರುವ ಮತ ಶಿಕ್ಷಣ ಸಂಸ್ಥೆಗೆ ಅವನನ್ನು ಸೇರಿಸ
ಬೇಕೆಂದು ಗೊತ್ತುಮಾಡಿದರು.

ಈ ಮತಶಿಕ್ಷಣದ ಉದ್ದೇಶವು, ದೂರದೂರದ ದೇಶಗಳಿಗೆ
ಹೋಗಿ ಕ್ರೈಸ್ತಮತ ಪ್ರಸಾರ ಮಾಡುವ ಮಿಶನರಿಗಳನ್ನು
ತಯಾರುಮಾಡುವದಾಗಿದ್ದಿತು. ಆದರೆ ಅಲ್ಲಿ ಸೇರುವುದಕ್ಕೆ
ಸುಲಭವಾಗಿ ಪ್ರವೇಶ ದೊರೆಯುವಂತಿರಲಿಲ್ಲ, ಆ ಸಂಸ್ಥೆಯವರು
ಅಭ್ಯರ್ಥಿಗಳನ್ನು ಸೇರಿಸುವುದಕ್ಕೆ ಮೊದಲು ಅವರ ಧಾರ್ಮಿಕ
ನಿಷ್ಠೆ, ಬುದ್ಧಿಮತ್ತೆ, ಸೇವಾದೃಷ್ಟಿ ಮತ್ತು ಸದಾಚಾರ ಇದನ್ನು
ಚೆನ್ನಾಗಿ ಪರೀಕ್ಷಿಸುತ್ತಿದ್ದರು. ಫರ್ಡಿನಾಂಡನ ಪ್ರವೇಶಕ್ಕೆ ಇದ್ದ
ಇನ್ನೊಂದು ತೊಂದರೆಯೆಂದರೆ, ಅವನಿಗೆ ೧೮ ತುಂಬಿರಲಿಲ್ಲ.
ಅವನ ಶಿಕ್ಷಣವೂ ಮುಗಿದಿರಲಿಲ್ಲ. ಇದಕ್ಕೆ ಪ್ರತಿಯಾಗಿ, ಅವನ
ಹಿರಿಯರ ಪ್ರಯತ್ನ ಜೋರಾಗಿ ಸಾಗಿದ್ದಿತು. ಮುಖ್ಯಾಧ್ಯಾಪಕರ
ಬಲವಾದ ಶಿಫಾರಸು ಅವರ ಬೆಂಬಲಕ್ಕಿದ್ದಿತು.

ಫರ್ಡಿನಾಂಡನು ಬಾಸೆಲ್ ಸಮಿತಿಯವರಿಗೆ ಅರ್ಜಿಯನ್ನು ಕೊಡುತ್ತ, ಅವರಿಗೆ ಒಂದು ವಿಶೇಷ ಮನವಿಯನ್ನು ಮಾಡಿ ಕೊಂಡಿದ್ದನು. "ಶಾಲೆಯಲ್ಲಿ ಇಷ್ಟರವರೆಗೆ ನಾನು ಕಲಿತಿದ್ದರೂ ಮನಸ್ಸಿಗೆ ಅದೇಕೊ ನೆಮ್ಮದಿಯೆನಿಸುತ್ತಿಲ್ಲ. ನನ್ನ ಧ್ಯೇಯ ವೇನೆಂಬುದು ಸ್ಪಷ್ಟವಾಗಿ ಗೋಚರವಾಗಲೊಲ್ಲದು. ನನಗೆ ಐಹಿಕ ಸುಖ ಸಾಧನಗಳು ಸೇರುತ್ತವೆ ; ಆದರೆ ಅವನ್ನು ಹೊಂದಿದ ಮೇಲೆ ಜುಗುಪ್ಸೆ ಉಂಟಾಗುತ್ತದೆ. ಇತ್ತ ನಿಮ್ಮ ಸಂಸ್ಥೆಯನ್ನು ಸೇರಿ, ತರಬೇತಿ ಹೊಂದಿದ ಮೇಲೆ ಉತ್ತಮ ಮಿಶನರಿಯಾದೇನೆಂಬ ವಿಶ್ವಾಸವೂ ನನ್ನಲ್ಲಿ ಇಲ್ಲ. ಆದರೆ ಈ ಮಾರ್ಗವನ್ನು ಹಿಡಿದ ಮೇಲೆ ಮನಸ್ಸಿಗೆ ಶಾಂತಿ–ನೆಮ್ಮದಿ ಸಿಕ್ಕೀತು. ಆದಕಾರಣ ನಾನು ಬಾಸೆಲ್‌ಗೆ ಬರಬೇಕೆನ್ನುತ್ತೇನೆ."

ಇದಲ್ಲವೆ ಪ್ರಾಮಾಣಿಕತೆ ! ಸಮಿತಿಯ ಸದಸ್ಯರಿಗೆ ಅವನ ಮೌಖಿಕ ಪರೀಕ್ಷೆಯಲ್ಲಿಯೂ ಈ ಧರ್ಮನಿಷ್ಠೆ, ಪ್ರಾಮಾಣಿ ಕತೆಗಳು ತೋರಿಬಂದವು. ಸಮಿತಿಯ ಅಧ್ಯಕ್ಷರು ಊರಲ್ಲಿರಲಿಲ್ಲ. ಆದಾಗ್ಯೂ ಇತರ ಸದಸ್ಯರು ಪ್ರವೇಶದ ಕೆಲವು ನಿಯಮಗಳನ್ನು ಸಡಿಲಿಸಿ ಫರ್ಡಿನಾಂಡನನ್ನು ಸೇರಿಸಿಕೊಂಡರು (ಕ್ರಿ. ಶ. ೧೮೪೫).

ತನ್ನ ಯೋಗ್ಯತೆಯ ಬಗ್ಗೆ ಅವನಿಗೇ ಸಂದೇಹವಿದ್ದಿತಲ್ಲವೆ ? ಹೀಗಾಗಿ ಅಳುಕಿನಿಂದಲೇ ಅಭ್ಯಾಸವನ್ನು ಆರಂಭಿಸಿದನು. ಆದರೆ ಹೊಸ ಹೊಸ ವಿಷಯಗಳನ್ನು ಕಲಿಯುವುದಕ್ಕೆ ತುಂಬಾ ಆತುರ, ಅವನಿಗೆ. ಕ್ರಮೇಣ, ಅಲ್ಲಿಯ ಶಿಕ್ಷಕರಿಗೆ ಅವನೊಬ್ಬ ಕುಶಾಗ್ರ ಬುದ್ಧಿಯವ ; ಕಷ್ಟಪಟ್ಟು ಅಭ್ಯಾಸ ಮಾಡುವವ, ಜೊತೆಗೆ ಅತ್ಯಂತ ಸಜ್ಜನ–ಎಂಬುದು ಅರಿವಾಯಿತು. ಇವಷ್ಟೇ ಅಲ್ಲದೆ ಭಾಷಾ ವಿಷಯಗಳಲ್ಲಿ ಅವನು ಯಾವಾಗಲೂ ಇತರರಿಗಿಂತ ಮುಂದಿದ್ದನು.

ಏಪ್ರಿಲ್ ೧೮೫೩ರಲ್ಲಿ ಫರ್ಡಿನಾಂಡ್ ತನ್ನ ವ್ಯಾಸಂಗವನ್ನು

ಮುಗಿಸಿದನು. ಈಗ ಆವನು ಮತಪ್ರಸಾರ ಕಾರ್ಯಕ್ಕೆ ಹೊರಡ ಬೇಕು. ಬಾಸೆಲ್ ಸಮಿತಿಯವರು ಅವನನ್ನು ಭಾರತಕ್ಕೆ ಕಳಿಸ ಬೇಕೆಂದು ಗೊತ್ತುಮಾಡಿದರು. ಭಾರತಕ್ಕೆ ಈಗಾಗಲೇ ನೂರಾರು ಮಿಶನರಿಗಳು ಬಂದು ಕ್ರೈಸ್ತಧರ್ಮ ಪ್ರಸಾರವನ್ನು ಕೈಕೊಂಡಿದ್ದರು. ಕೆಥೋಲಿಕ್ ಮತ್ತು ಪ್ರೊಟೆಸ್ಟಂಟ್–ಈ ಎರಡು ಕ್ರೈಸ್ತ ಪಂಥಗಳ ಹಲವಾರು ಸಂಸ್ಥೆಗಳಿಂದ ಈ ಮಿಶನರಿಗಳು ಬಂದವರಾಗಿದ್ದರು. ಬಾಸೆಲ್ ಸಂಸ್ಥೆಯ ಮಿಶನರಿ ಜನರು ಪ್ರೊಟೆಸ್ಟಂಟ್ ಪಂಥಕ್ಕೆ ಸೇರಿದವರು. ಅವರು ಭಾರತಕ್ಕೆ ಮೊದಲು ಬಂದುದು ಕ್ರಿ. ಶ. ೧೮೩೪ರಲ್ಲಿ. ಅವರು ತಮ್ಮ ಕೇಂದ್ರವನ್ನು ಮಂಗಳೂರಲ್ಲಿ ಸ್ಥಾಪಿಸಿದರು.

ಮಿಶನರಿಗಳ ಮುಖ್ಯ ಕಾರ್ಯವೆಂದರೆ ಜನರನ್ನು ಕ್ರೈಸ್ತ ಧರ್ಮಕ್ಕೆ ಸೇರಿಸುವುದು. ಆದರೆ ತಲೆತಲಾಂತರದಿಂದ ಪಾಲಿಸಿಕೊಂಡು ಬಂದ ತಮ್ಮ ಧರ್ಮವನ್ನು ಹಿಂದೂ ಜನರು ಬಿಟ್ಟುಕೊಡುವುದು ಹೇಗೆ ಸಾಧ್ಯ ? ಈ ದಿಶೆಯಲ್ಲಿ ಮಿಶನರಿಗಳ ದಾರಿಯು ಅತ್ಯಂತ ಕಷ್ಟದಾಯಕವಾಗಿದ್ದಿತು. ಮುಖ್ಯ ಆತಂಕವೆಂದರೆ ಈ ವಿದೇಶೀಯರಿಗೆ ನಮ್ಮ ಜನರ ಭಾಷೆಯಾಗಲೀ, ರೀತಿನೀತಿಗಳಾಗಲೀ ತಿಳಿಯವು. ಆದ್ದರಿಂದ ಮಿಶನರಿ ಜನರು ಆ ಆ ಪ್ರದೇಶದ ಭಾಷೆಯನ್ನು ಕಲಿತು, ಚೆನ್ನಾಗಿ ಮಾತಾಡಲು ಹಾಗೂ ಬರೆಯಲು ರೂಢಿಮಾಡಿಕೊಳ್ಳಬೇಕಾಗುತ್ತಿತ್ತು. ಹಿಂದೂ ಧರ್ಮದ ತತ್ತ್ವಗಳನ್ನು ತಿಳಿದುಕೊಳ್ಳಬೇಕಿತ್ತು. ಅನಂತರವೆ ಅವರಿಗೆ ಕ್ರೈಸ್ತಧರ್ಮವನ್ನು ಎತ್ತಿಹಿಡಿದು ಭಾಷಣ–ಪ್ರವಚನ ಮಾಡಲು ಸಾಧ್ಯ. ಅದಕ್ಕಾಗಿ ಅವರು ಸಂತೆ–ಜಾತ್ರೆಗಳ ಸಂದರ್ಭವನ್ನು ಉಪಯೋಗಿಸಿಕೊಳ್ಳುತ್ತಿದ್ದರು. ಚಳಿ ಬಿಸಿಲೆನ್ನದೆ ಊರೂರು ತಿರುಗುತ್ತಿದ್ದರು.

ಇಡೀ ವರ್ಷ ಹೀಗೆ ಕಷ್ಟಪಟ್ಟರೂ ಕೆಲವೇ ಕೆಲವರು ಇವರ

ಮತವನ್ನು ಸ್ವೀಕರಿಸಲು ಮುಂದೆ ಬರುತ್ತಿದ್ದರು. ಆದ್ದರಿಂದ ಜನರನ್ನು ತಮ್ಮೆಡೆಗೆ ಎಳೆದುಕೊಳ್ಳಲು ಮಿಶನರಿಗಳು ಮುಖ್ಯವಾಗಿ ಎರಡು ಉಪಾಯಗಳನ್ನು ಕೈಕೊಳ್ಳುತ್ತಿದ್ದರು. ಒಂದು, ಶಾಲೆಗಳನ್ನು ಸ್ಥಾಪಿಸಿ, ಪಾಶ್ಚಾತ್ಯ ರೀತಿಯ ಶಿಕ್ಷಣ ಕೊಡುವುದು. ನೂರು ವರ್ಷಗಳ ಹಿಂದೆ, ಎಲ್ಲ ಕಡೆಗೆ ಈಗಿನಂತೆ ಶಾಲೆಗಳಿರಲಿಲ್ಲ. ಹೈಸ್ಕೂಲುಗಳಂತೂ ಜಿಲ್ಲೆಗೊಂದರಂತೆ ಇದ್ದರೆ ಹೆಚ್ಚಾಯಿತು. ಆದ್ದರಿಂದ, ಆಗಿನ ಮಿಶನರಿಗಳ ಶಿಕ್ಷಣ ಕಾರ್ಯವು ಮಹತ್ವದ್ದಾಗಿತ್ತು.

ಎರಡನೆಯ ಕಾರ್ಯವೆಂದರೆ, ಪುಸ್ತಕಗಳನ್ನು ಬರೆಯುವುದು ಮತ್ತು ಮುದ್ರಿಸಿ ಪ್ರಸಾರ ಮಾಡುವುದು. ಮುದ್ರಣ ಕಲೆಯು ನಮ್ಮ ಜನಕ್ಕೆ ತೀರ ಹೊಸದು. ಯುರೋಪಿಯನ್ನರ ಮೂಲಕ ಅದು ನಮ್ಮಲ್ಲಿ ಆರಂಭವಾಯಿತು (ಕ್ರಿ. ಶ. ೧೮೧೭). ಮುಂದೆ ಕ್ರಿ.ಶ. ೧೮೫೩ರ ವೇಳೆಗೆ, ಇಡೀ ಕರ್ನಾಟಕದಲ್ಲಿ ಕೇವಲ ಐದಾರು ಮುದ್ರಣ ಯಂತ್ರಗಳಿದ್ದುವು ಮತ್ತು ಆ ೩೬ ವರ್ಷಗಳ ಅವಧಿಯಲ್ಲಿ ೬೫–೭೦ ಪುಸ್ತಕಗಳಷ್ಟೆ ಪ್ರಕಟವಾಗಿದ್ದುವು. ಅವು ಹೆಚ್ಚಾಗಿ ಪಠ್ಯಪುಸ್ತಕಗಳು ಇಲ್ಲವೆ ಕ್ರೈಸ್ತಧರ್ಮದ ಪುಸ್ತಿಕೆಗಳು.

ನಮ್ಮ ಕಿಟೆಲ್ ಬರುವುದಕ್ಕೆ ೨೦ ವರ್ಷ ಮುಂಚೆ, ಅಂದರೆ ಕ್ರಿ.ಶ. ೧೮೩೪ ರಿಂದ ಬಾಸೆಲ್ ಮಿಶನ್ನಿನವರು ಶಾಲಾಸ್ಥಾಪನೆ ಹಾಗೂ ಪುಸ್ತಕ ಪ್ರಕಟನೆ–ಇವನ್ನು ತುಸು ಮಟ್ಟಿಗೆ ಕೈಕೊಂಡಿದ್ದರು. ಮಂಗಳೂರು ಮಾತ್ರವಲ್ಲದೆ, ಧಾರವಾಡ, ಹುಬ್ಬಳಿ, ಮಡಿಕೇರಿ ಹಾಗೂ ಇನ್ನು ಕೆಲವು ಊರುಗಳನ್ನು ತಮ್ಮ ಕಾರ್ಯ ಚಟುವಟಿಕೆಗಳ ಕೇಂದ್ರಗಳನ್ನಾಗಿ ಮಾಡಿಕೊಂಡರು. ಎಲ್ಲ ಕಡೆಗೂ ಮೇಲೆ ಹೇಳಿದ ಚಟುವಟಿಕೆಗಳು ನಡೆದಿದ್ದುವು. ನಮ್ಮ ನಾಡಿನಲ್ಲಿ ಆಗ ಕೆಲಸ ಮಾಡುತ್ತಿದ್ದ ಬಾಸೆಲ್ ಮಿಶನರಿ

ಗಳಲ್ಲಿ ಮೊಗ್ಲಿಂಗ್ ಮತ್ತು ವೀಗಲ್ ಎಂಬವರು ಮುಖ್ಯರಾಗಿದ್ದರು.

೨

ಫರ್ಡಿನಾಂಡ್ ಕಿಟೆಲ್ ಡಿಸೆಂಬರ್ ೧೮೫೩ರಲ್ಲಿ ಮಂಗಳೂರಿಗೆ ಬಂದು ಇಳಿದರು. ಮೊದಲಿಗೆ ಅವರನ್ನು ಧಾರವಾಡಕ್ಕೆ ಕಳಿಸಲಾಯಿತು. ಕನ್ನಡದ 'ಅ ಆ' ಕಲಿತದ್ದು ಅಲ್ಲಿಯೇ. ಆಗ ಅವರಿಗೆ ಕೇವಲ ೨೧ ವರ್ಷ ವಯಸ್ಸು. ಇತರ ಮಿಶನರಿಗಳಿಗಿಂತ ಅವರು ಮಾಡಿದ ವಿಶೇಷ ಕೆಲಸವೆಂದರೆ, ಕನ್ನಡದ ಆಳವಾದ ಅಭ್ಯಾಸ. ಹಳಗನ್ನಡ ಮತ್ತು ನಡುಗನ್ನಡ ಕಾವ್ಯಗಳನ್ನು ಓದತೊಡಗಿದರು. ಅವೆಲ್ಲ ಕಾವ್ಯಗಳು ಈಗಿನಂತೆ ಮುದ್ರಣಗೊಂಡು, ಟೀಕೆ-ಟಿಪ್ಪಣಿಗಳೊಡನೆ ಪ್ರಕಟವಾಗಿರಲಿಲ್ಲ. ಅವುಗಳ ತಾಡವಾಲೆಯ ಹಸ್ತಪ್ರತಿಗಳನ್ನು ಓದಬೇಕಾಗುತ್ತಿತ್ತು. ಅಲ್ಲಿಯೂ ಒಂದು ತೊಡಕು. ಆ ಹಸ್ತಪ್ರತಿಗಳ ಪ್ರತಿಕಾರನು ಅನೇಕ ಕಡೆ ತಪ್ಪು ಮಾಡಿರುತ್ತಿದ್ದನು. ಇತ್ತ ಕಿಟೆಲ್‌ರಲ್ಲಿ 'ಭಾಷೆಯು ಅಶುದ್ಧವಿರಕೂಡದು' ಎಂಬ ಪ್ರಜ್ಞೆಯು ಆಳವಾಗಿ ಇದ್ದಿತು. ಆದ್ದರಿಂದ ತಾವೇ ಹಳಗನ್ನಡ ಕಾವ್ಯಗಳ ಶುದ್ಧ ಪ್ರತಿ ತಯಾರಿಸತೊಡಗಿದರು. ಅವುಗಳನ್ನು ಕೂಲಂಕಷವಾಗಿ ಅಭ್ಯಾಸ ಮಾಡಿದಂತೆಲ್ಲ ನಮ್ಮ ಕನ್ನಡ ಸಾಹಿತ್ಯದ ಬಗ್ಗೆ ಅವರಲ್ಲಿ ಆದರ ಭಾವನೆ ಮೂಡಿತು. ಅದರ ಸತ್ವ ಮತ್ತು ಸೌಂದರ್ಯಗಳ ಅರಿವಾಯಿತು.

ಕಿಟೆಲ್ಲರು ಕನ್ನಡದ ಜೊತೆ ಭಾಷೆಗಳಾದ ತಮಿಳು, ತೆಲುಗು, ಮಲೆಯಾಳಿ ಭಾಷೆಗಳನ್ನು ಅರಿತುಕೊಂಡರು. ತುಳುಭಾಷೆಯಂತೂ ಸರಿಯೆ. ಅಲ್ಲದೆ, ಹಿಂದೂಧರ್ಮದ ತತ್ತ್ವಗಳನ್ನು ವಿವರಿಸುವಂಥ ಗ್ರಂಥಗಳನ್ನು ಸಹ ಮನನ ಮಾಡಿದರು. ಇತರ ಅನೇಕ ಮಿಶನರಿಗಳು, ದೋಷ ಹುಡುಕುವ ಮತ್ತು ಅಪಾರ್ಥ

ಹಚ್ಚುವ ದೃಷ್ಟಿಯಿಂದ ಆ ಕೃತಿಗಳನ್ನು ಓದಿದರೆ, ಕಿಟೆಲ್ ಜ್ಞಾನ ಲಾಲಸೆಯಿಂದ ಅವುಗಳ ವ್ಯಾಸಂಗ ಮಾಡಿದರು. ಸುಮಾರು ಹತ್ತು ವರ್ಷ ಕಾಲ ಅವರ ಈ ಬಗೆಯ ಅಭ್ಯಾಸ ಮುಂದುವರಿಯಿತು.

ಕ್ರಿ.ಶ. ೧೮೬೨ ರಿಂದ ಕಿಟೆಲ್ ಅವರ ಸಾಹಿತ್ಯ ಕಾರ್ಯವು ಆರಂಭವಾಯಿತು. ಅವರು ಬರೆದ ಮೊದಲ ಪುಸ್ತಕವು ಎಳೆಯರಿಗೆ ಮಿಾಸಲು. ಸುಪ್ರಸಿದ್ಧವಾದ 'ಪಂಚತಂತ್ರ'ದ ಕಥೆಗಳನ್ನು ಕುರಿತು ಇದೆ ಆ ಪುಸ್ತಕ. ಆಗಿನ್ನೂ ಇಂದಿನ ಹೊಸಗನ್ನಡ ಗದ್ಯವು ರೂಢಿಯಲ್ಲಿರಲಿಲ್ಲ. ಅಂಥ ಕನ್ನಡವನ್ನು ಬರೆಯುವವರು ಇರಲೂ ಇಲ್ಲ. ಸ್ವಲ್ಪ ಹಳಗನ್ನಡ ಸರಣಿ ಸ್ವಲ್ಪ ಮಾತಿನ ಶೈಲಿಯಲ್ಲಿ ಕಿಟೆಲ್ ಪಂಚತಂತ್ರದ ಕಥೆಗಳನ್ನು ನಿರೂಪಿಸಿದರು. ಹೀಗಿದೆ ಆ ಕನ್ನಡ :

"ಮಹಾಮೇರುವಿನ ತಪ್ಪಲಲ್ಲು ಮೋಹನವಾಸವೆಂಬುದೊಂದು ವನದಲ್ಲು ಜಿಹ್ವಸ್ವಾದು ಎಂಬದೊಂದು ಚೂತವೃಕ್ಷಂ ಮಹಾಫಲಿತವಾಗಿರಲು ; ಬಲಧ್ವಜನೆಂಬುದೊಂದು ಸಿಂಹರಾಜನು ಆ ವನಾಂತರದಲ್ಲು ಬರುತ, ಈ ಚೂತವೃಕ್ಷಮಂ ಕಂಡು, ಆ ಹಣ್ಣಂ ಭಕ್ಷಿಸುವೆನೆಂದು ಆ ವೃಕ್ಷವನ್ನು ಕಾದುಕೊಂಡಿದ್ದುದಲ್ಲದೆ ತಾನು ಆ ಹಣ್ಣಂ ಭಕ್ಷಿಸುವದಕ್ಕೆ ಸಾಮರ್ಥ್ಯವಿಲ್ಲ..."

'ಶಾಲೆಗಳ ಪ್ರಯೋಜನಾರ್ಥಕವಾದ್ದು' ಎಂಬ ವಿಶೇಷಣವು ಈ ಪುಸ್ತಕದ ಹೊದಿಕೆಯ ಮೇಲಿದೆ. ಇದಕ್ಕೆ ಇಪ್ಪತ್ತು ಪುಟಗಳ ಮುನ್ನುಡಿ ಇದೆ. ಅದು ಮಾತ್ರ ವಿದ್ವಾಂಸರಿಗಾಗಿ ಎಂದು ಹೇಳಬಹುದು. ಅದರಲ್ಲಿ ಕಿಟೆಲ್ಲರು ಪಂಚತಂತ್ರ ಕಥೆಗಳ ಮೂಲವೆಲ್ಲಿಯದು, ಅದಕ್ಕೂ ಈಸೋಪನ ಇಂಥವೇ ಕತೆಗಳಿಗೂ ಏನು ಸಂಬಂಧ, ಎಂಬುದನ್ನು ವಿವರಿಸಿದ್ದಾರೆ.

ಕಿಟೆಲ್ಲರ ಇನ್ನೆರಡು ಪಠ್ಯ ಪುಸ್ತಕಗಳು ಇತಿಹಾಸಕ್ಕೆ

ಸಂಬಂಧಪಟ್ಟಿವೆ. ಮಾರಿಸ್ ಎಂಬವನು ಇಂಗ್ಲಿಷ್‌ನಲ್ಲಿ ಬರೆದಿದ್ದ ಇಂಗ್ಲೆಂಡ್ ಹಾಗೂ ಹಿಂದೂದೇಶದ ಚರಿತ್ರೆಯ ಪುಸ್ತಕಗಳವು. 'ಹಿಂದೂದೇಶದ ಚರಿತ್ರೆ'ಯಲ್ಲಿ ಪ್ರಾಚೀನ ಕಾಲದಿಂದ ೧೮೫೭ರ 'ದಂಗೆ'ಯ ವರೆಗೆ, ಭಾರತದ ಇತಿಹಾಸವಿದೆ. ಆದರೆ ೧೧ನೇ ಅಧ್ಯಾಯದಲ್ಲಿ ಮೈಸೂರ ರಾಜರ ಇತಿಹಾಸವನ್ನು ಪ್ರತ್ಯೇಕವಾಗಿ ಕೊಡಲಾಗಿದೆ.

ಇದೇ ಕಾಲಕ್ಕೆ ಕಿಟೆಲ್ಲರು ಕೆಲವು ಕನ್ನಡ ವಾಚನ ಪಾಠ ಮಾಲೆಗಳನ್ನು ಸಿದ್ಧಪಡಿಸಿದರು-ಪ್ರಾಥಮಿಕ ವರ್ಗದವರಿಗಾಗಿ. ಅದರಂತೆ, ಕನ್ನಡ ಕವಿತೆಗಳ ಸಂಗ್ರಹವನ್ನೂ ಹೊರತಂದರು (೧೮೬೩). 'ಸಂಣ ಕರ್ನಾಟಕ ಕಾವ್ಯ ಮಾಲೆ' ಎಂದು ಅದನ್ನು ಕರೆದರು. ಇವೆಲ್ಲ ಪಠ್ಯಪುಸ್ತಕಗಳನ್ನು ಅವರು ಮದ್ರಾಸ್ ಸರಕಾರದ ಕೇಳಿಕೆಯ ಮೇರೆಗೆ ಪ್ರಕಟಿಸಿದರು. ಅವು ಮುಂದಿನ ೧೦-೧೨ ವರ್ಷ ಕಾಲ ಶಾಲಾ ಪುಸ್ತಕಗಳಾಗಿ ಉಳಿದದ್ದರಿಂದ, ಸಾವಿರಾರು ಜನ ವಿದ್ಯಾರ್ಥಿಗಳು ಅವನ್ನು ಅಭ್ಯಾಸಮಾಡಿ ವಿಶೇಷ ಪ್ರಯೋಜನವನ್ನು ಹೊಂದಿದರು. ಅಂತೆಯೇ ಅವುಗಳ ಹಲವಾರು ಆವೃತ್ತಿಗಳು ನಮಗೆ ಕಂಡು ಬರುತ್ತವೆ. ಕಿಟೆಲ್ಲರು ಮಕ್ಕಳ ಜ್ಞಾನಾರ್ಜನೆಯನ್ನು ಗಮನದಲ್ಲಿಟ್ಟುಕೊಂಡು ಅವನ್ನು ರಚಿಸಿದರು. ಈಗಿನಂತೆ ಪಠ್ಯಪುಸ್ತಕ ನಿರ್ಮಾಣವು ವ್ಯವಸ್ಥಿತವಾಗಿರದಿದ್ದ ಕಾಲವದು. ಮತ್ತು ಕಿಟೆಲ್‌ರಿಗಿಂತ ಹಿಂದೆ ಪಠ್ಯಪುಸ್ತಕಗಳನ್ನು ಬರೆದವರು ಇವರಷ್ಟು ಶ್ರಮ ವಹಿಸುವ ಗೋಜಿಗೆ ಹೋಗಿರಲಿಲ್ಲ. ಕಿಟೆಲ್ಲರು ತಮ್ಮ ಪುಸ್ತಕಗಳಲ್ಲಿ ಶಬ್ದಾರ್ಥ, ಪ್ರಶ್ನೋತ್ತರ, ಲೇಖಕರ ಚರಿತ್ರೆ—ಇವನ್ನೆಲ್ಲ ಕೊಟ್ಟಿದ್ದಾರೆ. ಇತ್ತ ಅವರ ಹೊಸಗನ್ನಡ ಬರವಣಿಗೆಯೂ ಕ್ರಮೇಣ ಸುಧಾರಿಸುತ್ತ ನಡೆಯಿತು.

ಕಿಟೆಲ್ಲರು ಪತ್ರಿಕೋದ್ಯಮಿಯೂ ಆಗಿದ್ದರು. ಕನ್ನಡದ ಮೊತ್ತಮೊದಲಿನ ಪತ್ರಿಕೆಯ ಹೆಸರು 'ಮಂಗಳೂರು ಸಮಾಚಾರ.' ಅದು ಕ್ರಿ. ಶ. ೧೮೪೩ರಲ್ಲಿಯೇ ಹೊರಟಿದ್ದರೂ, ಕಿಟೆಲ್ ತಮ್ಮ ಪತ್ರಿಕೆಯನ್ನು ಆರಂಭಿಸಿದ ಕಾಲಕ್ಕೆ ಕನ್ನಡ ಭಾಷೆಯಲ್ಲಿ ಯಾವ ಪತ್ರಿಕೆಯೂ ಜೀವಂತವಿರಲಿಲ್ಲ! ಜೆ. ಮ್ಯಾಕ್ ಎಂಬ ಸಹೋದ್ಯೋಗಿ—ಮಿಶನರಿಯೊಡನೆ ಕಿಟೆಲ್ ಪಕ್ಷಪತ್ರಿಕೆಯೊಂದನ್ನು ಆರಂಭಿಸಿದರು. ಅದರ ಹೆಸರು 'ವಿಚಿತ್ರ ವರ್ತಮಾನ ಸಂಗ್ರಹ.' ಇಲ್ಲಿ ವಿಚಿತ್ರ–ಎಂದರೆ ಸಚಿತ್ರವೆಂದು ಅರ್ಥ. ಅದರಲ್ಲಿ ಇಂಗ್ಲಿಷ್ ಲೇಖನಗಳೂ ಇದ್ದುವು. ಆದ್ದರಿಂದ ಅದನ್ನು Illustrated Canarese Journal ಎಂದೂ ಕರೆದರು. ಈ ಪತ್ರಿಕೆಯಲ್ಲಿ ಭಾರತ, ಅದರಂತೆ ಅನ್ಯ ದೇಶಗಳ ಸುದ್ದಿಯನ್ನೂ ಕೊಡಲಾಗುತ್ತಿತ್ತು. ದಿನಪತ್ರಿಕೆಗಳು ಆಗಿನ ಕಾಲಕ್ಕೆ ಇರಲೇ ಇಲ್ಲ. ಆದಕಾರಣ ಇಂಥ ಸುದ್ದಿಗಳಿಗೆ ವಿಶೇಷ ಮಹತ್ವವಿದ್ದಿತು. ಈ ಪತ್ರಿಕೆ ಬಹಳ ದಿನ ನಡೆಯಲಿಲ್ಲ. ಏಕೆಂದರೆ, ಪತ್ರಿಕೆಗಳನ್ನು ಓದುವವರ ಸಂಖ್ಯೆ ಆಗಿನ ದಿನಗಳಲ್ಲಿ ಹೆಚ್ಚಾಗಿ ಇರಲಿಲ್ಲ. ಮಾರಾಟದ ಅನುಕೂಲಗಳೂ ಇರಲಿಲ್ಲ.

ಎಳೆಯರನ್ನು ಗಮನದಲ್ಲಿಟ್ಟುಕೊಂಡು ಕಿಟೆಲ್ಲರು ರಚಿಸಿದ ಇನ್ನೊಂದು ಮಹತ್ವದ ಕೃತಿಯೆಂದರೆ 'ಯೇಸು ಕ್ರಿಸ್ತನ ಶ್ರಮೇ ಚರಿತ್ರ' (ಕ್ರಿ.ಶ. ೧೮೬೫). ಇದು ಶಾಂತಿ ದೂತ ಯೇಸುವಿನ ಜೀವನದ ಕಡೆಯ ದಿನಗಳ ವೃತ್ತಾಂತ. ಆತನು ಅನ್ಯರಿಗಾಗಿ ಪಟ್ಟ ಶ್ರಮದ ಕಥೆಯಿದು. ಪಸ್ಕ ಹಬ್ಬದಲ್ಲಿ ಅವನು ಮಾಡಿದ ಕಡೆಯ ಭೋಜನ, ಪಿಲಾತ–ಹೆರೋದರ ಮುಂದೆ ನಡೆದ ಅವನ ವಿಚಾರಣೆ, ಸೈನಿಕರು ಅವನನ್ನು ಶಿಲುಬೆಗೆ ಏರಿಸಿದ್ದು–ಮುಂತಾದ ಸಂಗತಿಗಳ ತಿಳಿಯಾದ ವಿವರಣೆ ಇದೆ. ಕಿಟೆಲ್ಲರು ಬರೆಯುವದಕ್ಕೆ ಮುಂಚೆ ಹೊಸಗನ್ನಡ ಗದ್ಯವು ಇನ್ನೂ ರೂಢ

ವಾಗಿರಲಿಲ್ಲವಷ್ಟೆ. ನಾಲ್ಕಾರು ಜನ ಮಾತ್ರ ಆ ರೀತಿ ಬರೆಯು ಬಲ್ಲವರಾಗಿದ್ದರು. ಕ್ರಿಸ್ತನ ಚರಿತ್ರೆಯನ್ನು ಬರೆದವರಂತೂ ಇನ್ನೂ ಕಡಿಮೆ. ಅವನ ಶ್ರಮ, ತ್ಯಾಗಗಳ ಬದುಕನ್ನು ಕಿಟೆಲ್ಲರೇ ಮೊದಲಿಗೆ ಪುಸ್ತಕ ರೂಪದಲ್ಲಿ ವಿವರಿಸಿದರು ಅದೂ ಎಷ್ಟೊಂದು ಸರಳವಾಗಿ! ಅದರ ಈ ಒಂದು ಅವತರಣಿಕೆಯನ್ನು ನೋಡಿರಿ :

"ಪಿಲಾತನು ಪ್ರಧಾನ ಯಾಜಕರನ್ನೂ, ಅಧಿಪತಿಗಳನ್ನೂ, ಪ್ರಜೆಯನ್ನೂ ಕರಸಿ ಅವರಿಗೆ ಹೇಳಿದ್ದೇನೆಂದರೆ-ನೀವು ಈ ಮನುಷ್ಯನನ್ನು ನನ್ನ ಬಳಿಗೆ ತಂದಿದ್ದೀರಿ. ನೀವು ಅವನ ಮೇಲೆ ದೂರು ಹೇಳುವವಗಳಲ್ಲಿ ಒಂದು ಅಪರಾಧವನ್ನಾದರೂ ಈ ಮನುಷ್ಯನಲ್ಲಿ ಕಾಣಲಿಲ್ಲ. ಹೀಗಿದ್ದರೂ ಅವನನ್ನು ಶಿಕ್ಷಿಸಿ ಬಿಡಿಸುವೆನು..."

ಆಗ ಪಿಲಾತನು ಯೇಸುವನ್ನು ಬಾರುಗಳಿಂದ ಹೊಡೆಸಿ ದನು. ಮತ್ತು ರಾಣುವೆಯರು (ಸೈನಿಕರು) ಯೇಸುವಿನ ವಸ್ತ್ರ ಗಳನ್ನು ತೆಗೆದುಬಿಟ್ಟು, ರಕ್ತಾಂಬರದ ಒಲ್ಲಿಯನ್ನು ಆತನಿಗೆ ಹೊದ್ದಿಸಿ, ಮುಳ್ಳುಗಳಿಂದ ಕಿರೀಟವನ್ನು ಹೆಣೆದು, ಆತನ ತಲೆಯ ಮೇಲೆ ಇಟ್ಟು, ಆತನ ಬಲಗೈಯಲ್ಲಿ ಬೆತ್ತಕೊಟ್ಟು, ಆತನ ಮುಂದೆ ಮೊಣಕಾಲೂರಿ—ಯೆಹೂದ್ಯರ ಅರಸನೇ! ಶುಭವಾಗಲಿ!- ಎಂದು ಆತನನ್ನು ಹಾಸ್ಯ ಮಾಡಿದರು. ಮತ್ತೆ ಆತನ ತಲೆಯ ಮೇಲೆ ಉಗುಳಿ, ಬೆತ್ತ ತಕ್ಕೊಂಡು ಹೊಡೆದರು.

ರಾಣುವೆಯರು ಹೀಗೆ ಹಾಸ್ಯ ಮಾಡಿದ ಮೇಲೆ, ರಕ್ತಾಂಬರದ ಒಲ್ಲಿಯನ್ನು ಆತನಿಂದ ತೆಗೆದು, ಸ್ವಂತ ವಸ್ತ್ರ ಗಳಿಂದ ಹೊದ್ದಿಸಿ ಆತನನ್ನು ಶಿಲುಬೆಗೆ ಹಾಕುವದಕ್ಕೆ ತಕ್ಕೊಂಡು ಹೋದರು. ಆಗ ಸೀಮೋನನೆಂಬ ಮನುಷ್ಯನನ್ನು ಹಿಡಿದು, ಅವನು ಯೇಸುವಿನ ಶಿಲುಬೆ ಹೊತ್ತುಕೊಂಡು ಹೋಗುವ ಹಾಗೆ ಅವನನ್ನು ಬಿಟ್ಟಿ ಮಾಡಿಸಿ, ಅವನ ಮೇಲೆ ಶಿಲುಬೆ

## ೪ ಸಂಧಿ

### ಮಂತ್ರಿಸಭೆಯ ಮುಂದೆ ಆದ ವಿಚಾರಣೆಯೂ ಪೇತ್ರನು ಕರ್ತನನ್ನು ಅಲ್ಲಗಳೆದದ್ದೂ

ತ್ರದರ ದಂಡುನವರ ಗುಂಪೂ, ಸಹಸ್ರಾಧಿಪತಿಯೂ, ಯೆಹೂದ್ಯರ ಸೇವಕರೂ ಯೇಸುವನ್ನು ಹಿಡಿದು, ಆತನನ್ನು ಕಟ್ಟಿ, ಮೊದಲು ಅನ್ನನ ಬಳಿಗೆ ಆತನನ್ನು ತೆಕ್ಕೊಂಡು ಹೋದರು. ಯಾಕಂದರೆ ಇವನು ವರುಷದ ಪ್ರಧಾನಯಾಜಕನಾದ ಕಾಯಫನಿಗೆ ಮಾವನಾಗಿದ್ದನು. ಆ ಕಾಯಫನು — ಪ್ರಜೆಗೋಸ್ಕರ ಒಬ್ಬ ಮನುಷ್ಯನು ಸಂಹರಿಸಲ್ಪಡುವದು ಪ್ರಯೋಜನವಾಗಿದೆ ಎಂದು ಯೆಹೂದ್ಯರಿಗೆ ಆಲೋಚನೆ ಹೇಳಿದವನು. ಇದಲ್ಲದೆ ಸೀಮೋನ್ ಪೇತ್ರನೂ ಬೇರೊಬ್ಬ ಶಿಷ್ಯನೂ ಯೇಸುವನ್ನು ದೂರದಿಂದ ಪ್ರಧಾನಯಾಜಕನ ಮನೆ ಪರಿಯಂತರ ಹಿಂಬಾಲಿಸಿದರು. ಆ ಶಿಷ್ಯನ ಗುರುತು ಪ್ರಧಾನಯಾಜಕನಿಗೆ ತಿಳಿದಿರುವದರಿಂದ ಯೇಸುವಿನ ಸಂಗಡ ಪ್ರಧಾನಯಾಜಕನ ಪ್ರಾಕಾರದಲ್ಲಿ ಪ್ರವೇಶಿಸಿದನು. ಆದರೆ ಪೇತ್ರನು ಬಾಗಲಿನ ಬಳಿಯಲ್ಲಿ ಹೊರಗೆ ನಿಂತಿದ್ದನು. ಹೀಗಿರುವಾಗ ಪ್ರಧಾನಯಾಜಕನಿಗೆ ಗುರುತು ತಿಳಿದವನಾದ ಆ



ಸಂಗಡ ಮಾತಾಡಿ, ಪೇತ್ರನನ್ನು ಒಳಗೆ ಕರಕೊಂಡು ಬಂದನು. ಇವನು ಒಳಗೆ ಹೋಗಿ, ಅಂತ್ಯವನ್ನು ನೋಡ ಬೇಕೆಂದು, ಚಾಕರಿಯವರ ಸಂಗಡ ಕೂತು ಕೊಂಡನು. ಆದರೆ ದಾಸರೂ ಸೇವಕರೂ ಛಳಿ ಆದದರಿಂದ ಮಧ್ಯ ಓಲಗದಲ್ಲಿ ಇದ್ದಲಿ ಬೆಂಕಿಯನ್ನು ಹೊತ್ತಿಸಿ ಛಳಿ ಕಾಸಿ ಕೊಳ್ಳುತ್ತಾ ನಿಂತಿರುವಾಗ ಪೇತ್ರನು ಅವರ ಸಂಗಡ ನಿಂತು ಛಳಿ ಕಾಸಿ ಕೊಳ್ಳುತ್ತಿದ್ದನು. ಬಾಗಲು ಕಾಯುವವಳು ಬೆಳಕಿಗೆದುರಾಗಿ ಕೂತು ಕೊಂಡಿರುವ ಅವನನ್ನು ನೋಡಿ, ಅವನ ಮೇಲೆ ದೃಷ್ಟಿಯಿಟ್ಟು, ನೀನು ಸಹ ಈ ಮನುಷ್ಯನ ಶಿಷ್ಯರಲ್ಲಿ ಸೇರಿದವನಲ್ಲವೋ? ಅಂದಾಗ, ಅವನು ಎತ್ತಿ ಮುಂದೆ — ಅಲ್ಲ, ನೀ



ಹಾಕಿದರು. ಇದಲ್ಲದೆ ಜನರೂ, ಆತನಿಗೋಸ್ಕರ ಅಳುವ ಹೆಂಗಸರೂ ಬಹು ಸಮೂಹವಾಗಿ ಆತನನ್ನು ಹಿಂಬಾಲಿಸಿದರು. ಇದಲ್ಲದೆ ಬೇರೆ ಇಬ್ಬರು ಅಪರಾಧಸ್ಥರು ಆತನ ಸಂಗಡ ಸಂಹರಿಸಲ್ಪಡುವುದಕ್ಕೆ ವೈಯಲ್ಪಟ್ಟರು. ಮತ್ತು ಅವರು ಗೊಲ್ಗೊಥಾ ಎಂಬ ಸ್ಥಳಕ್ಕೆ ಬಂದಾಗ ಬೋಳ ಕಲಿಸಿದ ದ್ರಾಕ್ಷೇ ರಸವನ್ನು ಆತನಿಗೆ ಕುಡಿಯ ಕೊಟ್ಟರು. ಆದರೆ ಆತನು ಅದನ್ನು ರುಚಿ ನೋಡಿ, ಕುಡಿಯಲೊಲ್ಲದೆ ತೆಗೆದುಕೊಳ್ಳಲಿಲ್ಲ. ಅಲ್ಲಿ ಅವರು ಆತನನ್ನೂ ಆತನ ಸಂಗಡ ಇಬ್ಬರು ಕಳ್ಳರನ್ನೂ ಶಿಲುಬೆಗೆ ಹಾಕಿದರು. ಯೇಸು—ತಂದೆಯೇ ! ಅವರಿಗೆ ಮನ್ನಿಸು ; ಮಾಡುವದೇನೆಂದು ಅರಿಯರು ಎಂದನು.

ಶಿಲುಬೆಗೆ ಹಾಕಿದ ಮೇಲೆ ಆತನ ವಸ್ತ್ರಗಳನ್ನು ತೆಗೆದು ಒಬ್ಬೊಬ್ಬ ರಾಣುವೆಯವನಿಗೆ ಒಂದೊಂದು ಪಾಲಾಗಿ, ನಾಲ್ಕು ಪಾಲು ಮಾಡಿದರು. ಅಂಗಿಯನ್ನು ಸಹ ತಕ್ಕೊಂಡರು. ಜನರು ನೋಡುತ್ತಾ ನಿಂತರು. ಶಿಲುಬೆಗೆ ಸಮೀಪವಾಗಿ ಆತನ ತಾಯಿಯೂ, ಸಹೋದರಿಯಾದ ಮರಿಯಳೂ, ಮಗ್ದಲದವಳಾದ ಮರಿಯಳೂ ನಿಂತಿದ್ದರು.

ಸೂರ್ಯನು ಕತ್ತಲಾದನು, ಹೆಚ್ಚು ಕಡಿಮೆ ಒಂಭತ್ತನೇ ತಾಸಿನಲ್ಲಿ ಯೇಸು ಮಹಾಶಬ್ದದಿಂದ–ದೇವರೇ ! ನನ್ನ ದೇವರೇ ! ಯಾಕೆ ನನ್ನನ್ನು ಬಿಟ್ಟು ಬಿಟ್ಟಿದ್ದಿ ? ಎಂದನು. ಆ ಮೇಲೆ ಯೇಸು–ಎಲ್ಲಾ ತೀರಿತೆಂದು ತಿಳುಕೊಂಡು, ಬರಹವು ಈಡೇರುವ ಹಾಗೆ, ದಾಹವಾಯಿತು–ಎಂದನು. ಹುಳಿ ರಸ ತುಂಬಿದ ಪಾತ್ರೆಯು ಅಲ್ಲಿ ಇತ್ತು. ಆಗಲವರು ಪಾಚಿಯನ್ನು ಕೋಲಿಗೆ ಸಿಕ್ಕಿಸಿ, ಆತನ ಬಾಯಿಗೆ ತಗಲಿಸಿ ಆತನಿಗೆ ಕುಡಿಯಕೊಟ್ಟರು. ಮಿಕ್ಕಾದವರು, ಬಿಡು ! ಎಲಿಯನು ಬಂದು ಅವನನ್ನು ರಕ್ಷಿಸುವನೇನೋ ? ನೋಡೋಣ–ಅಂದರು. ಯೇಸು ಆ ಹುಳಿ ರಸ

ವನ್ನು ತಕ್ಕೊಂಡ ಮೇಲೆ, ಮಹಾಶಬ್ದದಿಂದ ಕೂಗಿ, ತಂದೆಯೇ ನಿನ್ನ ಕೈಗಳಲ್ಲಿ ನನ್ನ ಆತ್ಮವನ್ನು ಇಡುತ್ತೇನೆ–ಅಂದನು ತಲೆ ಬಾಗಿಸಿ ಪ್ರಾಣಬಿಟ್ಟನು.

ಆಗಲು, ಇಗೋ! ದೇವಾಲಯದ ಪರದೆಯು ಮೇಲಿನಿಂದ ಕೆಳಗಿನ ಪರಿಯಂತರ ಎರಡಾಗಿ ಹರಿದುಹೋಯಿತು. ಭೂಮಿಯು ಕಂಪಿಸಿತು. ಬಂಡೆಗಳು ಸೀಳಿ ಹೋದವು. ಸಮಾಧಿಗಳು ತೆರೆಯಲ್ಪಟ್ಟವು. ಮತ್ತು ಮಲಗಿದ್ದ ಅನೇಕ ಪರಿಶುದ್ಧರ ಶರೀರಗಳು ಎಬ್ಬಿಸಲ್ಪಟ್ಟವು.

'ಯೇಸು ಕ್ರಿಸ್ತನ ಶ್ರಮೇಚರಿತ್ರೆ'ಯನ್ನು ಬರೆಯುವುದಕ್ಕೆ ಕೆಲವು ವರ್ಷಗಳ ಹಿಂದೆ, ಅಂದರೆ ಕ್ರಿ. ಶ. ೧೮೬೨ರಲ್ಲಿ ಕ್ರಿಸ್ತನ ಕಥೆಯನ್ನು ಕಿಟೆಲ್ಲರು ಪದ್ಯ ರೂಪದಲ್ಲಿ ಬರೆದಿದ್ದರು. ಆ ಕೃತಿಯ ಹೆಸರು "ಕಥಾಮಾಲೆ" ಎಂಬುದು. ಇದಕ್ಕೊಂದು ಹಿನ್ನಲೆ ಇದೆ. ವಿದೇಶಗಳಿಂದ ಬಂದ ಮಿಶನರಿಗಳು ದೇಶೀಯ ಜನರೆದುರು ಹಾಡುವುದಕ್ಕೆ ಪ್ರಾರ್ಥನಾ ಪದ್ಯಗಳು ಬೇಕಾಗುತ್ತಿದ್ದುವು. ಅದಕ್ಕಾಗಿ ಅವರು ಜರ್ಮನ್ ಇಲ್ಲವೆ ಇಂಗ್ಲಿಷ್ ಭಾಷೆಯಲ್ಲಿ ಇದ್ದ ಪದ್ಯಗಳನ್ನು ತಮಗೆ ಪರಿಚಿತವಿರುವ ವಿದೇಶೀ ಧಾಟಿಯಲ್ಲಿಯೆ ಕನ್ನಡಕ್ಕೆ ಅನುವಾದಿಸಿ, ಅವನ್ನು ಹಾಡುತ್ತಿದ್ದರು. ಕಿಟೆಲ್ಲರು ಪ್ರಾರ್ಥನಾ ಪದ್ಯಗಳನ್ನು ಆ ರೀತಿಯಾಗಿ ಅನುವಾದಿಸದೇ, ಕನ್ನಡಿಗರ ಹಾಡಿನ ರೂಪಗಳಾದ ಷಟ್ಪದಿ, ಕೀರ್ತನೆ ಮುಂತಾದ ಕ್ರಮದಲ್ಲಿಯೇ ಬರೆಯಬೇಕು ಎಂದು ತಮ್ಮ ಸಹೋದ್ಯೋಗಿಗಳೊಡನೆ ವಾದಿಸಿದರು. ವಿದೇಶೀಯರು ನಡುಗನ್ನಡ ಕಾಲದ ಷಟ್ಪದಿಗಳನ್ನು ಅರ್ಥಮಾಡಿಕೊಂಡರೆ ಅಷ್ಟೇ ಸಾಕಿತ್ತು. ಇನ್ನು, ಅದರಲ್ಲಿ ಪದ್ಯರಚನೆ ಮಾಡುವುದು ಎಂದಾದರೂ ಸುಲಭವೆ ?

ಕಿಟೆಲ್ಲರು ಹಾಗೆ ಪ್ರಯತ್ನ ಮಾಡಿದುದಲ್ಲದೆ, ಅದರಲ್ಲಿ ಯಶಸ್ವಿಯಾದರು. 'ಶ್ರಮೆ ಚರಿತ್ರೆ'ವು ಕ್ರಿಸ್ತನ ಜೀವನದ ಕಡೆಯ

ದಿನಗಳ ಕಥೆಯಾದರೆ ಇದು ಯೇಸುವಿನ ಜನನ ಕಾಲದಿಂದ ಹಿಡಿದು, 'ದಿವಾರೋಹಣ'ದವರೆಗೂ ಇದೆ. ನಮ್ಮ ದೇಶದ ಕವಿಗಳು ಬರೆಯುವಂತೆ, ಶ್ರೀಕಾರದಿಂದ (ಶ್ರೀಯೇಹೋವಾಯ ನಮಃ) ಈ ಕಾವ್ಯವು ಆರಂಭವಾಗುತ್ತದೆ. ನಮ್ಮ ಕವಿಗಳಂತೆಯೇ ಕಿಟೆಲ್ಲರು 'ದೇವತಾಸ್ತುತಿ'ಯು, ಎಂದರೆ ಕ್ರಿಸ್ತನಸ್ತುತಿಯ ಪದ್ಯಗಳನ್ನು ಮೊದಲಿಗೆ ಬರೆದಿದ್ದಾರೆ. ಅಂಥ ಕೆಲವು ಪದ್ಯಗಳು ಈ ರೀತಿ ಅವೆ :

ಶ್ರೀ ಜನಾರ್ಜಿತ ಸತ್ಯಸಾಕ್ಷಿಯೆ
ಭೂಜನೈಕೋ ಗುರುವೆ. ದೇವಜ
ರಾಜಿಪವನೀ ರವಿಯೆ, ಸುಪಥವೆ, ಜೀವದಧಿಪತಿಯೇ ॥
ತೇಜದುದಯುವೆ, ದೇವಕಾಂತಿಯೆ,
ಮೂಜಗನ್ನಾಥೇಸೊ ನಿನ್ಮುಖ
ಮಾಜಿಕೊಳ್ಳದೆ, ಮೂಡು ಭಕ್ತರ ಹೃದಯ ಕಮಲದೊಳು ॥೧॥
ನಿನ್ನ ವಾಕ್ಯವ ನೋಡಿ ರಚಿಸಿದೆ-
ವುನ್ನತೇಶನೆ ಕಥೆಯ ಮಾಲೆಯ-
ನಿನ್ನು ನಿನಗೈ ವಂದಿಸುತ್ತೇವದನು ವಿನಯದಲಿ ॥
ಭಿನ್ನ ಮಾಡೈ ನಮ್ಮ ಬುದ್ಧಿಯ
ಮುನ್ನಿಸೇಸುವೆ ದಯದಿ ನಮ್ಮನು
ಬೆನ್ನ ಹತ್ತಲಿ ನಿನಗೆ, ರಾಜನೆ, ಸಕಲ ಮಾನವರೂ ॥೨॥
ಮತ್ತೆ, ಮನುಜರೆ, ನೀವು ಪರಿಸಿರಿ
ಚಿತ್ತವಿಟ್ಟೀ ಕಥಾಮಾಲೆಯ !
ಹೊತ್ತನರ್ಥಕೆ ಕಳೆವ ಕಾವ್ಯವಿದಲ್ಲವಲ್ಲವಲೇ ॥
ಉತ್ತಮೋತ್ತಮ ಕ್ರಿಸ್ತನಾಗಮ
ವಿತ್ತಲಾತನ ಶುದ್ಧ ಯಜ್ಞವು
ಸತ್ತನಂತರ ಮಹಿಮೆಯುದ್ಗಮವೆಲ್ಲ ತಿಳಿಯುವದು ॥೩॥

ಕಿಟೆಲ್ಲರು ತಮ್ಮ ವಯಸ್ಸಿನ ೨೧ನೆಯ ವರ್ಷದವರೆಗೆ, ಕನ್ನಡ ಎಂಬ ಹೆಸರನ್ನೂ ಸಹ ಕೇಳಿದವರಲ್ಲ. ಕನ್ನಡವು ಅವರ

# ಕಥಾಮಾಲೆ

ಶ್ರೀ ಯೇಹೋವಾಯ ನಮಃ ॥

---

## ವಂದನಾವಾಕ್ಯ

ಭಾಮಿನೀ ಷಟ್ಪದಿ

ಶ್ರೀಜನಾರ್ಚಕ[1] ಸತ್ಯಸಾಕ್ಷಿಯೆ,
ಭೂಜನೈಕಾಗುರುವೆ, ದೇವಜ,
ರಾಜಿಪ[2]ವನೀ[3] ರವಿಯೆ, ಸುಪಥವೆ, ಜೀವದಧಿಪತಿಯೇ, ॥
ತೇಜದುದಯವೆ, ದೇವಶಾಂತಿಯೆ,
ಮೂಜಗನ್ನಾಥೇಶಾ ನಿನ್ನುಖ
ಮಾಡಿ ಕಾಳ್ಪದೆ. ಮೂಡು ಚಿತ್ತಂ ಹೃದಯಕಮಲದೊಳು! ॥ ೧ ॥

ಶ್ರೀಮಹಾಂತನೆ, ದೇವದತ್ತನೆ,
ಶಾಮ[4]ಕರ್ತನೆ. ಶುದ್ಧ ಯಜ್ಞನೆ,
ನೇಮದಂತ್ಯನೆ, ವಿಜಯಶಾಲಿಯೆ, ಪಾಪಪರಿಹರನೇ, ॥
ಪ್ರೇಮದಬ್ಧಿ[5]ಯೆ, ಮನುಜಪುತ್ರನೆ,
ರಾಮಣೀಯಕ[6] ಸಖನೆ ನಿನ್ನಯ
ನಾಮದುನ್ನತಿ[7]ಯಾರು ನುಡಿದಾ[8]ಕುಲ [illegible]ವೆ:! ॥ ೨ ॥

---

[1] ಜನಾರ್ಚಕ = ಜನರು ಭಜಿಸುವ, [2] ರಾಜಿಪ = ಪ್ರಕಾಶಿಸುವ, [3] ಅವನಿ = ಭೂಮಿ, [4] ಶಾಮ = ಸಮಾಧಾನ, [5] ಪ್ರೇಮದಬ್ಧಿ = ಪ್ರೀತಿಯ ಸಮುದ್ರ, [6] ರಾಮಣೀಯಕ = ಸಂತೋಷ ಹುಟ್ಟಿಸುವ, [7] ಉನ್ನತಿ = ಹೆಚ್ಚಳಿಕೆ, [8] ಆಕುಲ = ಶ್ರೇಷ್ಠ;

ಮಾತೃಭಾಷೆಯಾದ ಜರ್ಮನ್‌ಗೆ ಹೊಂದಿಕೆಯಿದ್ದುದಲ್ಲ. ಕನ್ನಡ ಕಲಿಯಲಾರಂಭಿಸಿದ ಏಳೆಂಟು ವರ್ಷಗಳ ಅವಧಿಯಲ್ಲಿಯೇ ಇಷ್ಟು ಶುದ್ಧವಾದ ಸೊಗಸಾದ ರೀತಿಯಲ್ಲಿ ಕನ್ನಡ ಪದ್ಯಗಳನ್ನು ಸಹ ರಚಿಸುವ ಸಾಹಸ ಮಾಡಿದರು. ಅವರು ಎಷ್ಟೊಂದು ಉತ್ಸುಕತೆಯಿಂದ ಕನ್ನಡ ಭಾಷೆ, ಸಾಹಿತ್ಯಗಳನ್ನು ಕಲಿತಿದ್ದರೆಂಬುದು ಇದರಿಂದ ವ್ಯಕ್ತವಾಗುತ್ತದೆ.

ಇದು 'ಹೊಸ ಒಡಂಬಡಿಕೆ'ಯ 'ಕಥಾಮಾಲೆ' ಯಾಗಿದೆ. ಬೈಬಲಿನ ಹೊಸ ಒಡಂಬಡಿಕೆಯು (New Testament) ಕ್ರಿಸ್ತನ ಜೀವನದ ಘಟನೆಗಳನ್ನು ಅವನ ಶಿಷ್ಯರು (ಅಪೋಸ್ತಲರು) ವಿವರಿಸಿದ ಒಂದು ಗುಚ್ಛವಾಗಿದೆ. ಅದನ್ನೇ ಕಿಟೆಲ್ಲರು ೪೫ ಚಿಕ್ಕ ಅಧ್ಯಾಯಗಳನ್ನಾಗಿ ಮಾಡಿ ಈ ಕಾವ್ಯವನ್ನು ರಚಿಸಿದರು. ಇದರಲ್ಲಿ ಒಟ್ಟು ೪೨೫ ಪದ್ಯಗಳಿವೆ. ಅವುಗಳಲ್ಲಿ ಅರ್ಧದಷ್ಟು ಭಾಮಿನೀ ಷಟ್ಪದಿಯಲ್ಲಿವೆ. ವಾರ್ಧಕ ಷಟ್ಪದೀ ರೂಪದಲ್ಲಿ ಕೆಲವಿವೆ. ಕುಮಾರವ್ಯಾಸ ಭಾರತ, ಭೀಮಕವಿಯ ಬಸವಪುರಾಣ, ಲಕ್ಷ್ಮೀಶನ ಜೈಮಿನಿಭಾರತ ಮುಂತಾದವುಗಳನ್ನು ಆಳವಾಗಿ ಅಭ್ಯಾಸ ಮಾಡಿದ್ದರ ಫಲವಿದು.

ಇನ್ನೊಂದು ಮಹತ್ವದ ಅಂಶವೆಂದರೆ ಕಿಟೆಲ್ಲರು ಇದರಲ್ಲಿಯ ಕೆಲವು ಪದ್ಯಗಳನ್ನು ಪೂರ್ವೀರಾಗದ ಹಾಡಿನ ಮಟ್ಟಿನಲ್ಲಿ ರಚಿಸಿದ್ದಾರೆ. ಒಂದು ಹಾಡು "ನಂಬು ಮನುಜ, ನೋಡದೆ ನಂಬು ನಂಬು" ಎಂಬ ಪಲ್ಲವಿಯಿಂದ ಆರಂಭವಾಗುತ್ತದೆ. ಇನ್ನೊಂದು ಹಾಡಿಗೆ "ಯೇಸು, ನಿನ್ನ ಸಂಗತಿಯೆಷ್ಟು ರಮ್ಯ" ಎಂಬ ಪಲ್ಲವಿಯಿದೆ. ಇವನ್ನು ಅನ್ನುವಾಗ ದಾಸರ ಹಾಡುಗಳಿಗೂ ಅವಕ್ಕೂ ಇರುವ ವ್ಯತ್ಯಾಸವೇ ಕಂಡುಬರುವದಿಲ್ಲ.

ಇದೇ ಸುಮಾರಿಗೆ ಕಿಟೆಲ್ಲರಿಗೆ ಮದುವೆಯಾಯಿತು (ಕ್ರಿ. ಶ. ೧೮೬೦). ಅವರ ಹೆಂಡತಿಯ ಹೆಸರು ಪೌಲಿನ್ ಐತ್.

ಅವರಿಗೆ ಇಬ್ಬರು ಗಂಡು ಮಕ್ಕಳು ಜನಿಸಿದರು. ಆದರೆ ದುರ್ದೈವ ದಿಂದ ಪೌಲಿನ್ ಮದುವೆಯಾದ ನಾಲ್ಕು ವರ್ಷದಲ್ಲಿಯೆ ತೀರಿ ಕೊಂಡಳು. ಹೆಂಡತಿಯ ಅಕಾಲ ಮರಣದಿಂದ ಕಿಟೆಲ್‌ರಿಗೆ ಜೀವನದಲ್ಲಿ ಬೇಸರ ಮೂಡಿತು. ಇತ್ತ ನಮ್ಮ ದೇಶದ ಉಷ್ಣ ಹವೆಯಿಂದಾಗಿ ಪ್ರಕೃತಿಯು ಅಸ್ವಸ್ಥಗೊಳ್ಳಲು, ಅವರು ಸ್ವದೇಶಕ್ಕೆ ಹಿಂತಿರುಗಿದರು (ಕ್ರಿ. ಶ. ೧೮೬೬). ಆ ಎಳೆಯ ಮಕ್ಕಳನ್ನು ನೋಡಿಕೊಳ್ಳುತ್ತಿದ್ದ ಪೌಲಿನಳ ತಂಗಿ ಜ್ಯೂಲಿಯು ನಿಜವಾಗಿಯೂ ಅವುಗಳ ತಾಯಿಯಾಗಬಯಸಿದಳು. ಕಿಟೆಲ್ ಜ್ಯೂಲಿಯನ್ನು ಮದುವೆಯಾಗಿ, ಹೊಸ ಸಂಸಾರ ಸಮೇತ ಕನ್ನಡ ನಾಡಿಗೆ ಮರಳಿ ಬಂದರು (ಕ್ರಿ. ಶ. ೧೮೬೭). ಅವರ ಹೆಂಡತಿಯು ಬಲುಬೇಗ ತುಳು, ಕನ್ನಡ ಭಾಷೆಗಳನ್ನು ರೂಢಿಸಿಕೊಂಡಳು. ಕಿಟೆಲ್ ಕುಟುಂಬವು ಕೆಲ ಸಮಯ ಧಾರವಾಡ, ಹುಬ್ಬಳ್ಳಿ ಗಳಲ್ಲಿಯೂ, ಆದರೆ ಹೆಚ್ಚಾಗಿ ಮಡಿಕೇರಿಯಲ್ಲಿಯೂ ವಾಸ ವಾಗಿದ್ದಿತು. ಕೊಡಗಿನ ಪ್ರದೇಶವು ಹೆಚ್ಚು ತಂಪಿನದಾಗಿದ್ದುದ ರಿಂದ ಅದುವೆ ಕಿಟೆಲ್ಲರಿಗೆ ಪ್ರಿಯವಾದ ವಾಸಸ್ಥಳವಾಯಿತು.

ಕ್ರಿಸ್ತ ಚರಿತೆಯ ಮೇಲಿನವೆರಡು ಕೃತಿಗಳಲ್ಲದೇ ಕ್ರೈಸ್ತ ಹಾಗೂ ಹಿಂದೂಧರ್ಮಕ್ಕೆ ಸಂಬಂಧಿಸಿದ ಇನ್ನು ಹಲವು ಪುಸ್ತಕ ಗಳನ್ನು ಕಿಟೆಲ್ ಬರೆದಿದ್ದಾರೆ. ತಮ್ಮ ಧರ್ಮದ ಮೇಲ್ಮೆಯನ್ನು ಹೇಳುವಾಗ ಮಿಶನರಿಗಳು ಹಿಂದೂಧರ್ಮದಲ್ಲಿ ದೋಷಹುಡು ಕಲು ಯತ್ನಿಸುತ್ತಿದ್ದರು. ಅದಕ್ಕಾಗಿ ಎಂದೇ ಅವರು ಹಿಂದೂ ಧರ್ಮದ ತತ್ತ್ವಗಳನ್ನೂ ಭಗವದ್ಗೀತೆ, ಉಪನಿಷತ್ತುಗಳನ್ನೂ ಓದುತ್ತಿದ್ದರೆನ್ನಬಹುದು. ಕಿಟೆಲ್ಲರ ಮನೋವೃತ್ತಿ ಹಾಗಿರಲಿಲ್ಲ. ಇತರರಂತೆ ಅವರೂ ಮೊದಲಿಗೆ ಸಂಸ್ಕೃತದಿಂದ ಜರ್ಮನ್, ಇಂಗ್ಲಿಷ್ ಭಾಷೆಗಳಲ್ಲಿ ಈಗಾಗಲೇ ಅನುವಾದಗೊಂಡಿದ್ದ ಧರ್ಮ ಗ್ರಂಥಗಳನ್ನು ಮನನ ಮಾಡಿದರು. ದೋಷಗಳನ್ನು ಹುಡುಕುವ

ದಕ್ಕಿಂತ ಅವುಗಳ ಗೂಢ ಅರ್ಥವನ್ನು ತಿಳಿದುಕೊಳ್ಳಬೇಕೆಂದರು. ಅವರ ಈ ವಿಶೇಷ ಅಭ್ಯಾಸದ ಫಲವಾಗಿ, ಕಿಟೆಲ್ ಹಲವು ಗ್ರಂಥಗಳನ್ನು ಬರೆಯುವಂತಾಯಿತು.

ಮೊದಲಿನದು, ಹಿಂದೂ ಜನರಲ್ಲಿಯ ಯಜ್ಞಯಾಗಗಳಿಗೆ ಸಂಬಂಧಪಟ್ಟದ್ದು. ಪ್ರಾಚೀನ ಕಾಲಕ್ಕೆ ಯಜ್ಞಗಳಿಗೆ ವಿಶೇಷ ಮಹತ್ವವಿದ್ದಿತು. ಈ ಪದ್ಧತಿಯು ಆರ್ಯ ಹಾಗೂ ಯೆಹೂದ್ಯ ಜನಾಂಗದವರಲ್ಲಿ ಹೇಗೆ ಬೆಳೆಯಿತು? ಭಾರತದಲ್ಲಿ ಯಜ್ಞದ ಮೂಲ ಉದ್ದೇಶ ಏನಿದ್ದಿತು? ಆ ಉದ್ದೇಶವು ಆಮೇಲೆ ಯಾಕೆ ಕಣ್ಮರೆಯಾಯಿತು? ಎಂಬ ಪ್ರಶ್ನೆಗಳಿಗೆ ಈ ಇಂಗ್ಲಿಷ್ ಪುಸ್ತಕದಲ್ಲಿ ಉತ್ತರವಿದೆ. ಜೊತೆಗೆ ಮಹತ್ವದ ಕೆಲವು ಯಜ್ಞಗಳ ವಿವರಣೆಯಿದೆ. ಪುಸ್ತಕದ ತುಂಬೆಲ್ಲ ಟಿಪ್ಪಣೆಗಳು. ಭಾರತೀಯರಲ್ಲಿಯೆ ಯಾರೂ ಅದುವರೆಗೆ ಯಜ್ಞಗಳ ಬಗ್ಗೆ ಇಡಿಯಾಗಿ ಯೋಚಿಸಿ ಬರೆದಿರಲಿಲ್ಲ. ಅಂತೂ ಅದಕ್ಕೆ ಇಟ್ಟ 'ಯಜ್ಞಸುಧಾನಿಧಿ' ಎಂಬ ಹೆಸರು ಸಾರ್ಥಕವಾಯಿತು.

ಇನ್ನೊಂದು ಪುಸ್ತಕವು ಹಿಂದೂಧರ್ಮದ ಪ್ರಕಾರ ದೇವರು ಮತ್ತು ಅವನ ವಿವಿಧ ರೂಪ–ಈ ವಿಷಯವಾಗಿ ಇದೆ. ಮೂರನೆಯ ಪುಸ್ತಕವು ಜರ್ಮನ್ ಭಾಷೆಯಲ್ಲಿದೆ. ಶಿವನನ್ನು ಲಿಂಗರೂಪದಲ್ಲಿ ಪೂಜಿಸುವ ಕ್ರಮವಿದೆಯಷ್ಟೆ. ಲಿಂಗಪೂಜೆಯು ಭಾರತಕ್ಕೆ ಹೇಗೆ ಬಂದಿತು? ಅದು ಮೂಲತಃ ಆರ್ಯರ ಕಲ್ಪನೆಯೊ? ದ್ರಾವಿಡರದ್ದೊ? ಎಂಬೀ ಬಗೆಯ ಐತಿಹಾಸಿಕ ವಿವರಣೆ ಇದೆ.

ಆದರೆ 'ಕ್ರೈಸ್ತ ಸಭಾ ಚರಿತ್ರೆ' ಮತ್ತು 'ಪರಮಾತ್ಮಜ್ಞಾನ'–ಇವು ಮಾತ್ರ ಕನ್ನಡ ಭಾಷೆಯಲ್ಲಿಯೆ ಇವೆ. ಮೊದಲಿನದು ೭೬೬ ಪುಟಗಳ ದೊಡ್ಡ ಪುಸ್ತಕ. ಕ್ರೈಸ್ತ ಚರ್ಚಿನ ಉಗಮ ಮತ್ತು ಅದು ವಿವಿಧ ದೇಶಗಳಲ್ಲಿ ಬೆಳೆದು ಬಂದ ಬಗೆ–

# Ueber den Ursprung des Lingakultus in Indien

von


**F. Kittel,**

Missionar der Evangelischen Missionsgesellschaft zu Basel





MANGALORE

BASEL MISSION BOOK & TRACT DEPOSITORY

1876

LONDON
TRÜBNER & Co

BASEL
MISSIONS-BUCHHANDLUNG

ಮುಂತಾದ ವಿಷಯಗಳು ಈ ಚರಿತ್ರೆಯಲ್ಲಿವೆ. 'ಪರಮಾತ್ಮ ಜ್ಞಾನ'ವು ಹಿಂದೂ ಧರ್ಮದಲ್ಲಿಯ ದೇವರ ಕಲ್ಪನೆಯ ಟೀಕಾ ಪುಸ್ತಕವಾಗಿದೆ. ಕಿಟೆಲ್ಲರು ಅದನ್ನು ಸಂಭಾಷಣೆಯಲ್ಲಿ ಬರೆದಿದ್ದು, ಅದರ ಆರಂಭವು ಹೀಗಿದೆ :

"ದಕ್ಷಿಣ ಪಥದಲ್ಲಿ ರಾಯಪುರವೆಂಬುದು ಒಂದು ಊರು. ಅದರಲ್ಲಿ ಸುಚಿತ್ತಿ ಎಂಬ ಶಾನಭೋಗನೂ ರಂಗನೆಂಬ ವ್ಯಾಪಾರಸ್ಥನೂ ಇದ್ದರು. ಅವರು ನನ್ನದು, ತನ್ನದು ಎಂಬ ಹೊಟ್ಟೆಕಿಚ್ಚಿಲ್ಲದೆ ಪ್ರಾಣಗೆಳೆಯರಾಗಿದ್ದರು. ಅಣ್ಣನಾದ ಸುಚಿತ್ತಿಯು ಕಾಲಗತಿಯಲ್ಲಿ ಜಗದ್ರಕ್ಷಕನಾದ ಯೇಸುಕ್ರಿಸ್ತನ ಭಕ್ತನಾದರೂ ಅವರಿಬ್ಬರ ಗೆಳೆತನವು ಹಾಗೆ ಉಳಿಯಿತು.

ಇವರಿಬ್ಬರೂ ಒಂದು ರಾತ್ರಿ ಚಂದ್ರಶಾಲೆಯಲ್ಲಿ ಕುಳಿತುಕೊಂಡಿದ್ದರಂತೆ. ಆಗ ದೇವರು, ಮನುಷ್ಯನ ಪಾಪ ಪುಣ್ಯ–ಇವುಗಳ ವಿಷಯವಾಗಿ ವಾದ ನಡೆಯಿಸಿದ ಹಾಗೆ ಈ ಪುಸ್ತಕವು ರಚಿತವಾಗಿದೆ.

ಕಿಟೆಲ್ ಅವರ ಚರಿತ್ರೆಯಲ್ಲಿ ಕ್ರಿ.ಶ. ೧೮೭೨ನೆಯ ವರ್ಷವು ಮಹತ್ವದ್ದು. ಮೇಲೆ ಹೇಳಿದ, ಭಾರತೀಯ ತತ್ವಜ್ಞಾನಕ್ಕೆ ಸಂಬಂಧಪಟ್ಟ ಗ್ರಂಥಗಳು ಆ ವರ್ಷ ಪ್ರಕಟವಾದವು. ಆ ವರ್ಷ ಅವರು ಹಳಗನ್ನಡ ಗ್ರಂಥವನ್ನು ಶಾಸ್ತ್ರೀಯವಾಗಿ ಸಂಪಾದಿಸಿ ಹೊರತಂದರು. ಆ ವರ್ಷದ ಇನ್ನೊಂದು ಸಂಗತಿಯೆಂದರೆ 'ಇಂಡಿಯನ್ ಎಂಟಿಕ್ವೆರಿ' ಹೆಸರಿನ ಸುಪ್ರಸಿದ್ಧ ಪತ್ರಿಕೆ ಆರಂಭವಾದುದು.

ಭಾರತೀಯ ಇತಿಹಾಸ, ಶಾಸನ, ಧರ್ಮ, ಸಾಹಿತ್ಯ, ಭಾಷಾಶಾಸ್ತ್ರ, ಮುಂತಾದ ವಿಷಯಗಳ ಮೇಲೆ ಲೇಖನಗಳನ್ನು ಪ್ರಕಟಿಸುವಂಥ ಮತ್ತು ಈ ಎಲ್ಲ ವಿಷಯಗಳಿಗೇನೆ ಮೀಸಲಾ

# ಪರಮಾತ್ಮಜ್ಞಾನ

# KNOWLEDGE

OF THE

# SUPREME SPIRIT

A DIALOGUE ON THE HINDOO DOCTRINE OF GOD'S
BEING THE AUTHOR OF SIN

BY

**THE REV. F. K**



MANGALORE

PFLEIDERER & RIEHM, MISSION BOOKSHOP AND
GOVT SCHOOLBOOK DEPOT

1863

ದಂಥ ಪತ್ರಿಕೆ ಭಾರತದಲ್ಲಿ ಆಗ ಇದ್ದಿರಲಿಲ್ಲ. 'ಇಂಡಿಯನ್ ಎಂಟಿಕ್ವೆರಿ' ಆ ಕೆಲಸ ಕೈಗೊಂಡಿತು. ಅದರಿಂದ ಅನೇಕ ವಿದ್ವಾಂಸರಿಗೆ ಆಸರೆಯಾಯಿತು. ಮತ್ತು ಹೆಚ್ಚಿನ ಸಂಶೋಧನೆಗೆ ಪ್ರೋತ್ಸಾಹ ಕೊಟ್ಟಂತಾಯಿತು. ಕಿಟೆಲ್ಲರು ಅದರ ಪ್ರಯೋಜನ ಪಡೆದರು. ಈ ಪತ್ರಿಕೆಯಲ್ಲಿ ಕ್ರಿ. ಶ. ೧೮೭೨ ರಿಂದ ೧೮೭೫ರ ವರೆಗೆ ಪ್ರತಿ ವರ್ಷವೂ ಅವರು ಲೇಖನ ಬರೆದಿದ್ದಾರೆ. ಅವು ಕೊಡಗಿನ ಜೀವನ, ಕನ್ನಡ ಸಾಹಿತ್ಯ ಮತ್ತು ದ್ರಾವಿಡ ಭಾಷೆ-ಇವುಗಳ ಕುರಿತು ಇವೆ. ಕಿಟೆಲ್ಲರು ಹೆಚ್ಚಾಗಿ ವಾಸವಾಗಿದ್ದದ್ದು ಕೊಡಗಿನಲ್ಲಿ. ಆದಕಾರಣ ಅಲ್ಲಿಯ ಜನರ ಜೀವನ, ಮದುವೆಯ ಕ್ರಮ, ಮೂಢನಂಬಿಕೆ ಮುಂತಾದವನ್ನು ವರ್ಣಿಸಿದರು. ಅಲ್ಲದೆ ಆ ಸೀಮೆಯ ಕೆಲವು ಶಿಲಾಶಾಸನಗಳನ್ನು ಕಂಡುಹಿಡಿದರು.

ಕನ್ನಡ ಸಾಹಿತ್ಯದ, ವಿಶೇಷತಃ ಹಳಗನ್ನಡವನ್ನೂ ಕುರಿತ ಲೇಖನಗಳಲ್ಲಿ ಸರ್ವಜ್ಞನ ವಚನ, ದಾಸರ ಹಾಡು, ವೀರಶೈವ ಶರಣರ ಜೀವನ ಇವನ್ನು ಕನ್ನಡೇತರರಿಗೆ ಪರಿಚಯ ಮಾಡಿಕೊಟ್ಟರು. ೧೬ನೆಯ ಶತಮಾನದ ನಿಜಗುಣ ಶಿವಯೋಗಿಗಳು ತಮ್ಮ 'ವಿವೇಕ ಚಿಂತಾಮಣಿ' ಎಂಬ ಗ್ರಂಥದಲ್ಲಿ ಕರ್ನಾಟಕ ಸಂಗೀತದ ಬಗ್ಗೆ ಅಪೂರ್ವ ಮಾಹಿತಿ ಕೊಟ್ಟದ್ದಿದೆ. ಕಿಟೆಲ್ಲರು ಅದನ್ನು ಅನುವಾದಿಸಿ 'ಇಂಡಿಯನ್ ಎಂಟಿಕ್ವೆರಿ' ಪತ್ರಿಕೆಯಲ್ಲಿ ಪ್ರಕಟಿಸಿದರು ; ವಿದೇಶೀಯರಿಗೆ ಅದರ ಮಹತ್ವವನ್ನು ತಿಳಿಸಿಕೊಟ್ಟರು.

ಹಳಗನ್ನಡ ವಿಚಾರದಲ್ಲಿ ಅವರು ಮಾಡಿದ ಮಹತ್ಕಾರ್ಯವೆಂದರೆ ಎರಡು ಅಪೂರ್ವ ಗ್ರಂಥಗಳನ್ನು ಸಂಪಾದಿಸಿ, ಪರಿಷ್ಕರಿಸಿದುದು. ಈಗಲೂ ಇಂಥ ಕೆಲಸ ಕಷ್ಟದಾಯಕವೆನಿಸಿದೆ. ಮೊದಲಿಗೆ ಹಸ್ತಪ್ರತಿಗಳನ್ನು ದೊರಕಿಸಬೇಕು. ಆ ಹಸ್ತಪ್ರತಿಗಳನ್ನು ಓಲೆಗರಿಯ ಮೇಲೆ ಬರೆಯುವಾಗ ಅಕ್ಷರಗಳು ಮಸಕಾಗಿರುವು

ದುಂಟು. ಅನೇಕ ಶಬ್ದಗಳನ್ನು ತಪ್ಪುತಪ್ಪಾಗಿ ಬರೆದಿರುತ್ತಾರೆಂಬುದನ್ನೂ ನೋಡಿದ್ದೇವೆ. ಅದರಿಂದ ಕವಿಯ ಆಶಯವೇನಿದ್ದಿತೆಂಬುದು ತಿಳಿಯುವದೇ ಇಲ್ಲ. ಆದ ಕಾರಣ ಕಾವ್ಯ ಪರಿಷ್ಕರಣವು ತೊಡಕಿನದೆನಿಸಿದೆ. ಅದಕ್ಕೆ ತುಂಬಾ ಪರಿಶ್ರಮ ಬೇಕು ; ಸಂಪಾದಕನಲ್ಲಿ ವಿದ್ವತ್ತು ಇರಬೇಕು.

ಕಿಟೆಲ್ಲರು ಆ ಕಾರ್ಯ ಮಾಡಿದವರಲ್ಲಿ ಮೊತ್ತಮೊದಲಿಗರು. ಅವರು ಪ್ರಾಚೀನ ಹಸ್ತಪ್ರತಿಗಳನ್ನು ಕಣ್ಣಲ್ಲಿ ಕಣ್ಣಿಟ್ಟು ಓದಿದ್ದಲ್ಲದೆ ತಾವೇ ಪ್ರತಿ ಮಾಡಿಕೊಳ್ಳುತ್ತಿದ್ದರು. ಆಮೇಲೆ ಒಂದೇ ಗ್ರಂಥದ ಬಗ್ಗೆ ಇದ್ದ ಹಲವು ಪ್ರತಿಗಳನ್ನು ಹೋಲಿಸಿ, ಅವುಗಳಲ್ಲಿ ಯಾವ ಪಾಠವು ಸರಿಯಾದದ್ದೆಂಬುದನ್ನು ನಿರ್ಣಯಿಸಬೇಕು. ಇಡೀ ಗ್ರಂಥಕ್ಕೆ ಟಿಪ್ಪಣಿ, ಪದ್ಯಸಾರ, ಶಬ್ದಾರ್ಥ, ಕವಿಯ ಚರಿತ್ರೆ, ಇತರ ಭಾಷೆಯ ಅಥವಾ ಆ ಬಗೆಯ ಗ್ರಂಥಗಳೊಡನೆ ಹೋಲಿಕೆ ಇವನ್ನೆಲ್ಲ ಸಿದ್ಧಗೊಳಿಸಬೇಕು. ಇಷ್ಟೆಲ್ಲ ತೊಂದರೆ ವಹಿಸುವ ಕಾರ್ಯವನ್ನು ಕಿಟೆಲ್ಲರಿಗೆ ಮುಂಚೆ ಕನ್ನಡದಲ್ಲಿ ಯಾರೂ ಮಾಡಿರಲಿಲ್ಲ. ಆ ರೀತಿಯಾಗಿ ಅವರು 'ಶಬ್ದಮಣಿದರ್ಪಣ' ಮತ್ತು 'ಛಂದೋಂಬುಧಿ'—ಈ ಎರಡು ಹಳಗನ್ನಡ ಕೃತಿಗಳನ್ನು ಬೆಳಕಿಗೆ ತಂದರು. ಕೇಶಿರಾಜನೆಂಬವನಿಂದ ರಚಿತವಾದ 'ಶಬ್ದಮಣಿದರ್ಪಣ'ವು ಹಳಗನ್ನಡ ವ್ಯಾಕರಣ ಗ್ರಂಥ ಅತ್ಯಂತ ಪ್ರೌಢವಾದುದು. ಅದು ವ್ಯಾಕರಣದ ಎಲ್ಲಾ ವಿಚಾರಗಳನ್ನು ಒಳಗೊಂಡಿದೆ. ಇಂದಿಗೂ ಅದರ ಅಭ್ಯಾಸವು ಮುಂದುವರಿದಿದ್ದು, ಪಠ್ಯಪುಸ್ತಕವೆಂದು ನೇಮಿಸುತ್ತಾರೆ.

ನಾಗವರ್ಮ (ಒಂದನೆಯವ)ನಿಂದ ರಚಿತವಾದ 'ಛಂದೋಂಬುಧಿ'ಯಾದರೂ ಅಷ್ಟೇ ಮಹತ್ವದ ಗ್ರಂಥವಾಗಿದೆ. ಕನ್ನಡದಲ್ಲಿ ಛಂದಸ್ಸಿನ ಬಗ್ಗೆ ಬರೆದ ಮೊದಲ ಗ್ರಂಥವದು. ಕಿಟೆಲ್ಲರು ಇವೆರಡರ ಹತ್ತಾರು ಹಸ್ತಪ್ರತಿಗಳನ್ನು ಕಣ್ಣ ಮುಂದಿಟ್ಟುಕೊಂಡು

ನಾಗವರ್ಮನ

# ಕನ್ನಡಛಂದಸ್ಸು

NAGAVARMA'S

# CANARESE PROSODY

EDITED WITH AN INTRODUCTION TO THE WORK AND AN ESSAY ON CANARESE LITERATURE

BY

REV. F. KITTEL

B. M.

MANGALORE

BASEL MISSION BOOK & TRACT DEPOSITORY

1875

LONDON
TRÜBNER & CO.

BASEL
MISSIONSHAUS

ಪಾಠಾಂತರಗಳನ್ನು ಗೊತ್ತುಪಡಿಸಿದರು. ಕವಿಚರಿತ್ರೆ, ಕೃತಿಪರಿಚಯಗಳೊಡನೆ ಪ್ರಕಟಿಸಿದರು. 'ಛಂದೋಂಬುಧಿ' ಆವೃತ್ತಿಯ ವಿಶೇಷವೆಂದರೆ ಅದರ ಪೀಠಿಕೆಯಲ್ಲಿ ಕನ್ನಡ ಸಾಹಿತ್ಯ ಚರಿತ್ರೆಯ ಮೇಲೆ ಒಂದು ದೀರ್ಘ ನಿಬಂಧವನ್ನು ಸೇರಿಸಿದುದು. ಅನೇಕ ಹಳಗನ್ನಡ ಕವಿಗಳ ಮತ್ತು ಅವರ ಗ್ರಂಥಗಳ ಬಗ್ಗೆ ಮಾಹಿತಿ ದೊರಕಿದ್ದರೂ, ಆ ಮಾಹಿತಿಯ ಆಧಾರದಿಂದ ನಮ್ಮ ಸಾಹಿತ್ಯದ ಚರಿತ್ರೆಯನ್ನು ಅದುವರೆಗೆ ಯಾರೂ ರೂಪಿಸಿರಲಿಲ್ಲ. ಕಿಟೆಲ್ಲರು ಆ ಕೆಲಸ ಮಾಡಿದರು. ಅನಂತರ ಸಮಗ್ರ ಸಾಹಿತ್ಯಚರಿತ್ರೆಯನ್ನು ಬರೆದವರೆಂದರೆ ಬಿ. ಎಲ್. ರೈಸ್, ಆರ್. ನರಸಿಂಹಾಚಾರ್ ಮತ್ತು ಈಚೆಗೆ ಡಾ॥ ರಂ. ಶ್ರೀ. ಮುಗಳಿ ಅವರು.

ಇದುವರೆಗೆ ನಾವು ಕಿಟೆಲ್ಲರಲ್ಲಿ ಕ್ರೈಸ್ತಭಕ್ತಿ, ಹಿಂದೂಧರ್ಮದಲ್ಲಿ ಆಸಕ್ತಿ ಹಾಗೂ ಹಳಗನ್ನಡದ ಪ್ರಸಾರ ದೃಷ್ಟಿ–ಈ ಗುಣಗಳು ಇದ್ದುವೆಂಬುದನ್ನು ಕಂಡುಕೊಂಡೆವು. ಈ ವೇಳೆಗೆ ಅಂದರೆ ಕ್ರಿ. ಶ. ೧೮೭೭ರ ಸುಮಾರಿಗೆ ಕಿಟೆಲ್ಲರು ಕರ್ನಾಟಕದಲ್ಲಿ ಅಷ್ಟೇ ಅಲ್ಲ ಇಡೀ ಭಾರತದಲ್ಲಿಯೆ ಓರ್ವ ಹಿರಿಯ ವಿದ್ವಾಂಸ ಎಂಬ ಹೆಸರನ್ನು ಗಳಿಸಿದ್ದರು. ಬಾಸೆಲ್ ಮಿಶನ್‌ದವರು ಅವರ ವಿಷಯದಲ್ಲಿ ವಿಶೇಷ ಗೌರವ ಮತ್ತು ಅಭಿಮಾನವನ್ನಿಟ್ಟುಕೊಂಡಿದ್ದರು. ಇತರ ಮಿಶನರಿ ಸಹೋದ್ಯೋಗಿಗಳಿಗಿದ್ದಂತೆ ಹೆಚ್ಚಿನ ತಿರುಗಾಟ, ಮತಪ್ರಸಾರ ಕಾರ್ಯ, ಅಥವಾ ಔದ್ಯೋಗಿಕ ಶಿಕ್ಷಣ–ಮೊದಲಾದವುಗಳ ತಾಪತ್ರಯ ಕಿಟೆಲ್ಲರಿಗಿರಲಿಲ್ಲ. ಕನ್ನಡದ ಕೆಲಸವನ್ನು ಮಾಡಲೆಂದೇ ಅವರನ್ನು ದೂರದ ಬಾಸೆಲ್‌ದಿಂದ ನಮ್ಮ ನಾಡಿಗೆ ಕಳಿಸಿದಂತಾಗಿತ್ತು.

ಆಗ ಮಿಶನ್ನಿನವರು ಅವರಿಗೆ ಒಂದು ದೊಡ್ಡ ಹೊಣೆಯನ್ನು ಒಪ್ಪಿಸಿದರು. ಅದೆಂದರೆ ಕನ್ನಡ-ಇಂಗ್ಲಿಷ್ ಶಬ್ದಕೋಶ

ವನ್ನು ರಚಿಸುವ ಕಾರ್ಯ. ಈ ಕಾರ್ಯವು ಎಷ್ಟು ಸಮಯದ ವರೆಗೆ ಮುಂದುವರಿದೀತು ಎಂಬುದರ ಕಲ್ಪನೆ ಮಿಶನ್ನಿನವರಿಗೂ ಇರಲಿಲ್ಲ. ಕಿಟೆಲ್ಲರಿಗೂ ಇರಲಿಲ್ಲ! ಅದೇನಿದ್ದರೂ ಧಾರ್ಮಿಕ, ಸಾಹಿತ್ಯಕ ಮುಂತಾದ ಕಾರ್ಯಗಳಿಗಿಂತ ಕಿಟೆಲ್ಲರಿಗೆ ಇದುವೆ ಹೆಚ್ಚು ಪ್ರಿಯವಾದದ್ದಿತ್ತು.

ನಮಗೆ ಶಬ್ದಗಳೆಂದರೆ ನಿರ್ಜೀವ, ಹಾಗೂ ನಿಸ್ಸಾರವಾದವುಗಳು. ದಿನಬಳಕೆಯ ಶಬ್ದಗಳಾಗಿದ್ದರೆ ಅವುಗಳಿಗೆ ಯಾವ ಮಹತ್ವವೂ ಇಲ್ಲ. ಇನ್ನು ಅರ್ಥ ತಿಳಿಯದಿದ್ದರಂತೂ ಅವುಗಳ ಬಗ್ಗೆ ನಮಗೆ ಸಿಟ್ಟು! ಆದರೆ ಸಂದರ್ಭದ ಮೇಲಿಂದ ಇತರ ಪ್ರಯೋಗಗಳ ಆಧಾರದಿಂದ, ಮತ್ತು ಅದೇ ಶಬ್ದವು ಬೇರೆ ಭಾಷೆಗಳಲ್ಲಿ ಕಂಡು ಬಂದ ರೀತಿಯಿಂದ ಅವುಗಳ ಅರ್ಥವನ್ನು ತಿಳಿಯುವುದು ಉತ್ಸಾಹದ ಕೆಲಸವಾಗಬಲ್ಲುದು. ಬರಿಯ ಶಬ್ದಗಳಿಂದ ಕೆಲವೊಂದು ಐತಿಹಾಸಿಕ, ಸಾಮಾಜಿಕ ಹಾಗೂ ಜನರ ನಡವಳಿಕೆಗೆ ಸಂಬಂಧಪಟ್ಟ ಅಂಶಗಳನ್ನೂ ತಿಳಿದುಕೊಳ್ಳಬಹುದು!

ಕನ್ನಡ ಕಲಿಯಲಾರಂಭಿಸಿದ ಕಾಲದಿಂದಲೇ ಕಿಟೆಲ್ಲರು ಕನ್ನಡ ಶಬ್ದಗಳ ವಿಷಯದಲ್ಲಿ ಆಸಕ್ತಿ ವಹಿಸಿದ್ದರು. ಅವರಿಗಿಂತ ೩೦ ವರ್ಷಗಳ ಹಿಂದೆ ರೀವ್ಹ್ ಎಂಬ ಇನ್ನೊಬ್ಬ ಮಿಶನರಿಯು ಕನ್ನಡ-ಇಂಗ್ಲಿಷ್ ಕೋಶವನ್ನು ತಯಾರಿಸಿದ್ದನು. ವೆಸ್ಲಿಯನ್ ಮಿಶನರಿಯಾದ ಸ್ಯಾಂಡರ್ಸನ್ ತಯಾರಿಸಿದ ಕೋಶವೂ ಇದ್ದಿತು. ಆದರೆ ರೀವ್ಹನ ಕೋಶದಲ್ಲಿ ತುಂಬಾ ತಪ್ಪುಗಳೂ ಅನವಶ್ಯಕ ಶಬ್ದಗಳೂ ಇದ್ದವು. ಸ್ಯಾಂಡರ್ಸನ್ ಕೋಶವು ಕನ್ನಡ ಶಬ್ದಕ್ಕೆ ಪ್ರತಿಯಾಗಿ ಒಂದೆರಡು ಇಂಗ್ಲಿಷ್ ಶಬ್ದಗಳನ್ನು ಕೊಟ್ಟಂಥ ಸಾದಾ ನಿಘಂಟು ಆಗಿದ್ದಿತು. ಮತ್ತು ಅಪೂರ್ಣವಿದ್ದಿತು. ಕಿಟೆಲ್ಲರಿಗೆ ಅದರಿಂದ ಸಮಾಧಾನ ದೊರಕಿರಲಿಲ್ಲ. ಹಳಗನ್ನಡ ಕಾವ್ಯ

ಗಳಲ್ಲಿಯು ಮತ್ತು ಜನಬಳಕೆಯಲ್ಲಿಯು ಅನೇಕಾನೇಕ ಶಬ್ದಗಳಿಗೆ ಆ ಕೋಶಗಳಲ್ಲಿ ಸ್ಥಳವಿರಲೇ ಇಲ್ಲ.

ಹಳಗನ್ನಡ ಶಬ್ದಗಳ ಅರ್ಥ ತಿಳಿಯಬೇಕಾದರೆ ಅನೇಕ ಬಾರಿ, ತಮಿಳು, ತೆಲುಗು, ಮಲೆಯಾಳ ಭಾಷೆಗಳ ಶಬ್ದಕೋಶಗಳು ಮತ್ತು ವ್ಯಾಕರಣ ಗ್ರಂಥಗಳು ನೆರವಾಗಬಲ್ಲುವು. ಏಕೆಂದರೆ ಅವು ಕೂಡಾ ಡ್ರಾವಿಡ ಭಾಷೆಗಳು. ಈ ಮೂಲ ಡ್ರಾವಿಡ ಭಾಷೆಯನ್ನು ಕುರಿತು ಡಾ. ಕಾಲ್ಡವೆಲ್ ಎಂಬ ಇನ್ನೊಬ್ಬ ವಿದ್ವಾಂಸ ಮಿಶನರಿ ಗ್ರಂಥವೊಂದನ್ನು ಬರೆದಿದ್ದರು (ಕ್ರಿ. ಶ. ೧೮೫೬). ಅದರಲ್ಲಿ ಅವರು ಮೇಲೆ ಹೇಳಿದ ಭಾಷೆಗಳು, ಜೊತೆಗೆ ಕನ್ನಡ, ತುಳು ಭಾಷೆಗಳು ಪರಸ್ಪರ ನಿಕಟ ಸಂಬಂಧವುಳ್ಳವು ಎಂಬುದನ್ನು ಸಿದ್ಧಪಡಿಸಿದ್ದರು. ಅದರಂತೆ ಮರಾಠೀ, ಹಿಂದೀ, ಗುಜರಾತಿ ಮೊದಲಾದ ಉತ್ತರದ ಭಾಷೆಗಳು ಸಂಸ್ಕೃತ (ಆರ್ಯನ್) ಭಾಷೆಯಿಂದ ಹುಟ್ಟಿದವು ಎಂಬುದನ್ನು ಸಹ ಕಾಲ್ಡವೆಲ್ ವಿವರಿಸಿದ್ದರು. ಅದಕ್ಕೂ ಮುಂದೆ ಹೋಗಿ, ಅನೇಕ ದ್ರಾವಿಡ ಶಬ್ದಗಳು ಸಂಸ್ಕೃತ ಭಾಷೆಯಲ್ಲಿ ಸೇರಿಕೊಂಡಿವೆ ಎಂಬುದನ್ನೂ ತೋರಿಸಿದ್ದರು.

ನಮ್ಮ ಕಿಟೆಲ್ ಕಾಲ್ಡವೆಲ್ಲರ ಗ್ರಂಥವನ್ನೂ ಇತರ ದ್ರಾವಿಡ ಭಾಷಾ ಗ್ರಂಥಗಳನ್ನೂ ಚೆನ್ನಾಗಿ ಅಭ್ಯಾಸ ಮಾಡಿದ್ದರು. ಮತ್ತು ಕನ್ನಡವನ್ನು ಸಾಧನವಾಗಿಟ್ಟುಕೊಂಡು ದ್ರಾವಿಡ ಭಾಷಾ ಸಂಶೋಧನೆಯನ್ನು ಮುಂದುವರಿಸಿದರು. ಈ ಹಿಂದೆ ಬ್ರೌನ್ ಎಂಬವರು ತೆಲುಗು ಭಾಷೆಯ ಬಗ್ಗೆಯೂ, ಗುಂಡರ್ಟ್ ಎಂಬವರು ಮಲೆಯಾಳೀ ಭಾಷೆಯ ಬಗ್ಗೆಯೂ ಇದೇ ರೀತಿಯ ಸಂಶೋಧನೆ ಮಾಡಿದ್ದರು. ತಮಿಳಿಗೆ ಸ್ವತಃ ಕಾಲ್ಡವೆಲ್ಲರೇ ಇದ್ದರು. ಆಗ ಕನ್ನಡ ಭಾಷೆಯ ವಕ್ತಾರರಾಗಿ ಕಿಟೆಲ್ಲರು ಮುಂದೆ ಬಂದರು. ಬೇರೆ ದ್ರಾವಿಡ ಭಾಷಾ ವಿದ್ವಾಂಸರಿಗೆ ಕನ್ನಡದ ಹೋಲಿಕೆ ಅಗತ್ಯ

ಬಿದ್ದಾಗ, ಕಿಟೆಲ್ಲರ ಮತ್ತು ಅವರ ಲೇಖನ, ಪುಸ್ತಕಗಳ ನೆರವನ್ನು ಪಡೆಯುವಂತಾಯಿತು.

ಕ್ರಿ.ಶ. ೧೮೭೪ರಷ್ಟು ಹಿಂದೆ ಕಿಟೆಲ್ಲರು ಕನ್ನಡ ಕಾವ್ಯ ಸಂಕಲನವೊಂದನ್ನು ಹೊರತಂದರೆಂದು ಹೇಳಿದೆವಷ್ಟೆ. ಆಗಲೇ ಅವರು ಮಹತ್ವದ ಕನ್ನಡ ಶಬ್ದಗಳ ಅರ್ಥವನ್ನು ಕೊಟ್ಟಿದ್ದರು. ಅದರ ಮೂರನೆಯ ಆವೃತ್ತಿಯ ಕಾಲಕ್ಕೆ (ಕ್ರಿ. ಶ. ೧೮೭೪) ಈ ಶಬ್ದಾರ್ಥವು ಇನ್ನಿಷ್ಟು ದೊಡ್ಡದಾಯಿತು. ನೂರಾರು ಹಳಗನ್ನಡ ಶಬ್ದಗಳಿಗೆ ಮೊದಲ ಬಾರಿಗೆ ಅರ್ಥಕೊಟ್ಟಿರುವುದನ್ನು ಇಲ್ಲಿ ಕಾಣುತ್ತೇವೆ. ಇತ್ತ, ತಮಗೆ ಬಂದ ಸಂದೇಹಗಳನ್ನು ಇತರ ವಿದ್ವಾಂಸರಿಗೆ ಪತ್ರ ಬರೆದು, ಇಲ್ಲವೆ 'ಇಂಡಿಯನ್ ಎಂಟಿಕ್ವೆರಿ' ಪತ್ರಿಕೆಯಲ್ಲಿ ಲೇಖ ಬರೆದು ವ್ಯಕ್ತಪಡಿಸುತ್ತಿದ್ದರು. ಆ ಪತ್ರಿಕೆಯಲ್ಲಿಯ ಅವರ ಮೊತ್ತಮೊದಲಿನ ಲೇಖವೇ ಇಂಥ ಜಿಜ್ಞಾಸೆಯನ್ನು ಒಳಗೊಂಡಿದೆ :

"ಸಿಡಿಮದ್ದಿನ ಪುಡಿ : ಭಾರತದಲ್ಲಿ ಇದರ ಉಪಯೋಗವು ಮೊದಲಬಾರಿಗೆ ಎಂದು ಆಗಿದೆಯೆಂಬುದನ್ನು ಯಾರಾದರೂ ಓದುಗರು ತಿಳಿಸಿರುವರೆ ? ಭಾರತದ ವಿವಿಧ ಭಾಷೆಗಳಲ್ಲಿ ಈ ಶಬ್ದವು ಅದೆಂದು ಪ್ರಥಮವಾಗಿ ಪ್ರಯೋಗವಾಗಿದೆಯೆಂಬುದನ್ನು ತಿಳಿಯ ಬಯಸಿದ್ದೇನೆ. ಹಳಗನ್ನಡದಲ್ಲಿ ಇದು (ಸಂಸ್ಕೃತದ) ತದ್ಭವ ರೂಪದಲ್ಲಿ ದೊರೆಯುತ್ತದೆ. ಉದಾಹರಣೆಗೆ ಬಲ ಮದ್ದು ಅಂಕದೌಷಧ."

ಸಾವಿರಾರು ಗಟ್ಟಲೆ ಕನ್ನಡ ಶಬ್ದಗಳನ್ನು ಕಿಟೆಲ್ಲರು ಅದೆಂತು ಸಂಗ್ರಹಿಸಿದರೆಂಬುದು ಗಮನಾರ್ಹವಾಗಿದೆ. ಶಬ್ದ ಸಂಗ್ರಹಕ್ಕಾಗಿ ಆ ಶಬ್ದವಿರುವ ವಾಕ್ಯ, ಆ ವಾಕ್ಯವಿರುವ ಗ್ರಂಥ– ಇವನ್ನು ಹುಡುಕಿಕೊಂಡು ಹೋಗಬೇಕು. ಹಾಗೆ ಅವರು ಆ ಕಾಲಕ್ಕೆ ದೊರೆಯುತ್ತಿದ್ದ ಪ್ರಾಚೀನ ಕಾವ್ಯಗಳು, ದಾಸರ ಹಾಡು

ಗಳು, ಸರ್ವಜ್ಞ ವಚನಗಳು–ಇವುಗಳಿಂದ ಶಬ್ದ ವಾಕ್ಯಗಳನ್ನು ಬರೆದುಕೊಂಡರು. ಇನ್ನು ಹೊಸಗನ್ನಡ ಪದಗಳಿಗಾಗಿ ವಿವಿಧ ಪಠ್ಯ ಪುಸ್ತಕಗಳನ್ನೂ ಗಾದೆ ಮಾತುಗಳನ್ನೂ ತಿರುವಿ ಹಾಕಿದರು. ನಾವು 'ರಸೀದಿ', 'ಕಂದೀಲು', 'ಕಚೇರಿ' – ಮುಂತಾದ ಅನ್ಯ ಭಾಷಾ ಶಬ್ದಗಳನ್ನು ಬಳಸುತ್ತಿದ್ದೇವೆ, ತಾನೇ. ಕಿಟೆಲ್ಲರು ಅವನ್ನೂ ನಿತ್ಯದ ಬಳಕೆಯಲ್ಲಿರುವಂತಹ ಕನ್ನಡ ಶಬ್ದಗಳನ್ನೂ ಕಲೆ ಹಾಕಿದರು. ಹಳಗನ್ನಡ, ಹೊಸಗನ್ನಡ, ಗ್ರಂಥಗಳಲ್ಲದೆ, ರೀವ್ಹ್ ಮುಂತಾದವರ ಶಬ್ದಕೋಶಗಳಿಂದಲೂ ಶಬ್ದಗಳನ್ನು ಸಂಗ್ರಹಿಸಿದರು. ಔಷಧ, ಗಿಡಮೂಲಿಕೆ – ಇವುಗಳ ಪದಗಳೂ ಕಿಟೆಲ್ಲರಿಗೆ ಬೇಕಾದುವು.

ಮೈಸೂರ ಕಡೆಯ ಬಳಕೆಯ ಶಬ್ದಗಳೂ ಧಾರವಾಡ ಕಡೆಯವೂ ಒಂದೇ ಆಗಿರುವದಿಲ್ಲ. ಅನೇಕ ಶಬ್ದಗಳ ವಿಚಾರ ದಲ್ಲಿ ಅಂತರವು ಕಂಡುಬರುತ್ತದೆ. ಮೈಸೂರ ಪ್ರದೇಶದ ಎಲ್ಲ ಶಬ್ದಗಳನ್ನು ಕಲೆಹಾಕುವದಕ್ಕಾಗಿ ಕಿಟೆಲ್ಲರಿಗೆ ಆ ಸೀಮೆಯಲ್ಲಿ ತಿರುಗಾಡಲು ಅವಕಾಶ ದೊರೆತಿರಲಿಲ್ಲ. ಆದಕಾರಣ ಅವರು ಆ ಭಾಗದಲ್ಲಿ ಬದುಕಿ ಬಾಳಿದ ಓರ್ವ ಶಾಸ್ತ್ರಿಯನ್ನು ನೇಮಿಸಿ ಕೊಂಡು, ಮಡಕೇರಿಗೆ ಕರೆದೊಯ್ದರು. ಆದರೆ ಅವನೊ ಎಲ್ಲ ದಕ್ಕೂ "ಹೌದು ಸ್ವಾಮೀ, ಈ ಶಬ್ದ ನಮ್ಮ ಭಾಗದಲ್ಲಿ ಬಳಕೆ ಯಲ್ಲಿದೆ" ಎಂದು ಹೇಳುವವನಾದನು. ಕಿಟೆಲ್ಲರಿಗೆ ಈ ತಪ್ಪು ತಿಳಿದುಬಂದದ್ದು, ಹಸ್ತಪ್ರತಿಯನ್ನು ಇನ್ನೇನು ಮುದ್ರಣಕ್ಕೆ ಕಳಿಸಬೇಕು ಎಂದೆನ್ನುವಾಗ. ಆಗ ಅವರಿಗೆ ಅದೆಷ್ಟು ಬೇಸರ ವಾಗಿರಬೇಕು ! ಸುದೈವಕ್ಕೆ ಆಯುತ ವೇಳೆಗೆ ಯೋಗ್ಯ ವಿದ್ವಾಂಸ ರೊಬ್ಬರು ದೊರಕಿದರು. ಅವರ ಹೆಸರು ಎಂ. ಸಿ. ಶ್ರೀನಿವಾಸಾ ಚಾರ್ಯ. ಅವರ ಸೂಚನೆಯ ಮೇರೆಗೆ ಕಿಟೆಲ್ಲರು ಅವಶ್ಯವಿರುವ ತಿದ್ದುಪಡಿಗಳನ್ನು ಮಾಡಿದರು.

ಉತ್ತರ ಕರ್ನಾಟಕದಲ್ಲಿ ಬಳಕೆಯಲ್ಲಿರುವ ಶಬ್ದಗಳ ವಿಚಾರದಲ್ಲಿ ಈ ತೊಂದರೆ ಬರಲಿಲ್ಲ. ಈಗಾಗಲೇ ಆ ಭಾಗದಲ್ಲಿ ನೆಲಸಿದ್ದ ರೆವರೆಂಡ್ ತ್ಸಿಗ್ಲರ್ ಎಂಬ ಅವರ ಸಹೋದ್ಯೋಗಿಯೂ, ಹುಬ್ಬಳ್ಳಿಯಲ್ಲಿ ಶಾಲಾಮಾಸ್ತರರಾಗಿದ್ದ ವಸ್ತ್ರದ ಶಿವಲಿಂಗಯ್ಯ ಎಂಬವರೂ ಇತರ ವಿದ್ವಾಂಸರೂ ನೆರವಾದರು.

ಶಬ್ದ ಸಂಗ್ರಹವೊಂದಾದರೆ ಸಾಕೆ ? ಅವುಗಳ ಸರಿಯಾದ ಅರ್ಥ ಯಾವುದು ? ಪ್ರಯೋಗಗಳಿಂದ ಹೊರಡುವ ಬೇರೆ ಬೇರೆ ಅರ್ಥಗಳು ಯಾವುವು ? ಆ ಶಬ್ದದ ಮೂಲ ರೂಪವೇನು ? ಅದು ದ್ರಾವಿಡ ಪದವಾಗಿದ್ದರೆ, ತಮಿಳು, ತೆಲುಗು, ಮಲೆಯಾಳಿ ಮುಂತಾದ ಭಾಷೆಯಲ್ಲಿ ಯಾವ ರೂಪದಲ್ಲಿ ದೊರೆಯುತ್ತದೆ ? ಇವನ್ನೆಲ್ಲ ನಿರ್ಣಯಿಸುವ ಕೆಲಸವನ್ನು ಕಿಟೆಲ್ಲರೇ ಮಾಡಿದರು.

ಹೀಗೆ, ಅವರ ಶಬ್ದ ಸಂಗ್ರಹದ ಮತ್ತು ಅರ್ಥ ವಿವರಣೆಯ ಕಾರ್ಯವು ಭರದಿಂದ ಸಾಗಿದ್ದಾಗ ಕಿಟೆಲ್ಲರಿಗೆ ಅಸ್ವಾಸ್ಥ್ಯ ವುಂಟಾಯಿತು (ಕ್ರಿ.ಶ. ೧೮೭೮). ಈ ವೇಳೆಗೆ ಅವರು ನಾಡಿನಲ್ಲಿ ನೆಲೆಸಿ ೨೫ ವರ್ಷಗಳೇ ಸಂದಿದ್ದವು. ಆಗ ಅವರು ತಮ್ಮ ಮಿಶನರಿ ಕಾರ್ಯದಿಂದ ತಾತ್ಪೂರ್ತಿಕವಾಗಿ ನಿವೃತ್ತರಾಗಿ ಸ್ವದೇಶಕ್ಕೆ ಹಿಂತಿರುಗಿದರು. ಆದರೆ ಕೋಶದ ಕೆಲಸ ನಿಂತಿರಲಿಲ್ಲ. ಅಲ್ಲಿ ಇದ್ದಾಗ ಇಡೀ ಹಸ್ತಪ್ರತಿಯನ್ನು ಬರೆಯುವ ಕೆಲಸ ಕೈಕೊಂಡರು. ಅದನ್ನು ಅಲ್ಲಿಂದಲೇ ಮಂಗಳೂರಿನ ಮುದ್ರಣಾಲಯಕ್ಕೆ ಕಳಿಸಬಹುದಿತ್ತು. ಆದರೆ ಅನೇಕಾನೇಕ ಶಬ್ದಗಳ ವಿಚಾರದಲ್ಲಿ ಕಿಟೆಲ್ಲರಿಗೆ ಸಂಶಯವಿದ್ದಿತು. ಆದಕಾರಣ ಅವರು ಕ್ರಿ. ಶ. ೧೮೮೩ ನೆಯ ವರ್ಷದಲ್ಲಿ ಮತ್ತೆ ಕರ್ನಾಟಕಕ್ಕೆ ಬಂದರು. ಈ ನಿಘಂಟುವನ್ನು ಆದಷ್ಟು ಪರಿಪೂರ್ಣಗೊಳಿಸಬೇಕು ಎಂಬುದು ಅವರ ಅಪೇಕ್ಷೆಯಾಗಿದ್ದಿತು. ಅಂತೆಯೇ ಮುದ್ರಣಕ್ಕೆ ಹೋದಾಗಲೂ ಅದರ ತಿದ್ದುಪಡಿ ನಡೆದಿದ್ದಿತು !

ನಿಮಗೂ ಮುಂದೆ ಕಿಟೆಲ್ ಕೋಶವನ್ನು ನೋಡುವ ಪ್ರಸಂಗ ಬಂದೇ ಬರುತ್ತದೆ. ಆದ್ದರಿಂದ ಅದರಲ್ಲಿಯ ಶಬ್ದಾರ್ಥವು ಬಂದ ಬಗೆಯನ್ನು ಈಗ ತಿಳಿದುಕೊಳ್ಳುವ. ಒಂದು ಶಬ್ದಕ್ಕಿರುವ ವಿವಿಧ ಅರ್ಥಗಳು, ಸೋದರ ಭಾಷೆಗಳಲ್ಲಿ ಅದರ ರೂಪ, ಹಳೆಯ ಕಾವ್ಯಗಳಲ್ಲಿ ಅದರ ಪ್ರಯೋಗ, ಆ ಶಬ್ದವಿರುವ ಗಾದೆ ಮಾತು, ಅದು ಪ್ರಚಲಿತವಿರುವ ಪ್ರದೇಶ (ಮೈಸೂರು, ಮಂಗಳೂರು, ಧಾರವಾಡ ಇ.), ಇವೆಲ್ಲವನ್ನೂ ಕಿಟೆಲ್ ಒದಗಿಸಿದ್ದಾರೆ. ಇಷ್ಟೊಂದು ವಿವರಗಳಿರುವುದರಿಂದ ಕೆಲಕೆಲವು ಶಬ್ದಗಳ ವಿವರಣೆಯು ನಾಲ್ಕು ಕಾಲಮ್‌ಗಳ ವರೆಗೂ ಮುಂದುವರಿದಿದೆ !

ಸುಮಾರು ೧೫ ವರ್ಷಗಳವರೆಗೆ ಅಖಂಡವಾಗಿ ನಡೆದಿದ್ದ ಕೋಶರಚನೆಯು ಕೊನೆಗೊಮ್ಮೆ ಮುಗಿದು ಅಚ್ಚಿನ ಮನೆಗೆ ಹೋಗಲು ಸಿದ್ಧವಾಯಿತು (ಕ್ರಿ. ಶ. ೧೮೮೮). ಅಲ್ಲಿಯೂ ಅತ್ಯಂತ ಕುಸುರಿನ ಕೆಲಸ. ಬೇರೆ ಬೇರೆ ಗಾತ್ರದ, ಬೇರೆ ಬೇರೆ ರೂಪದ ಮೊಳೆಗಳನ್ನು ಬಾಸೆಲ್‌ಮಿಶನ್ನಿನವರು ಈ ಕೋಶದ ಮುದ್ರಣಕ್ಕೆಂದು ಎರಕ ಹೊಯ್ದು ಸಿದ್ಧಗೊಳಿಸಿದರು. ಸಂಕ್ಷಿಪ್ತಾಕ್ಷರ, ಪೂರ್ಣ ವಿರಾಮ, ಅರ್ಧ ವಿರಾಮ–ಮುಂತಾದವು ಎಲ್ಲೆಲ್ಲಿ ಬರಬೇಕು ಎಂಬ ವಿಚಾರದಲ್ಲಿ ಸಹ ಕಿಟೆಲ್ಲರು ವಿಶೇಷ ಗಮನ ಕೊಟ್ಟರು.

ಇಷ್ಟೆಲ್ಲ ನಡೆದಿರುವಾಗ ಅವರ ಕಣ್ಣಿನ ನರಗಳ ಶಕ್ತಿಯು ಕುಂಠಿತವಾಯಿತು. ಆದರೂ ಅಚ್ಚಿನ ಕರಡುಗಳನ್ನು ತಾವೇ ತಿದ್ದಬೇಕು, ಅದರಲ್ಲಿ ಎಳ್ಳಷ್ಟೂ ತಪ್ಪು ಉಳಿಯಬಾರದು ಎಂಬುದು ಅವರ ಇಚ್ಛೆಯಾಗಿದ್ದಿತು. ಈ ಕರಡುಗಳನ್ನು ತಿದ್ದುವ ಕಾರ್ಯದಲ್ಲಿ ಅವರಿಗೆ ಶಿವರಾಮ ಭಾರದ್ವಾಜ ಎಂಬವರು ತುಂಬಾ ನೆರವಾದರಂತೆ.

A

# KANNAḌA-ENGLISH

# DICTIONARY

BY

REV F KITTEL

B G E M



MANGALORE

BASEL MISSION BOOK & TRACT DEPOSITORY

1894

BASEL
MISSIONSBUCHHANDLUNG

LEIPZIG
O HARRASSOWITZ

ಅಂತೂ ಕೋಶದ ಮುದ್ರಣವು ೧೩೦೦ ಪುಟಗಳಷ್ಟು ಮುಂದುವರಿಯಿತು. ಕಿಟೆಲ್ಲರಿಗೆ ಕಣ್ಣಿನ ನೋವಲ್ಲದೆ, ದೇಹಾರೋಗ್ಯವು ಕೆಟ್ಟಿತು. ಆಗ ಅವರು ಸ್ವದೇಶಕ್ಕೆ ಹಿಂತಿರುಗಲೇಬೇಕಾಯಿತು (ಕ್ರಿ. ಶ. ೧೮೯೨). ಉಳಿದ ೫೦೦ ಪುಟಗಳ ಮುದ್ರಣವು ಮುಗಿಯುತ್ತ ಬಂದಾಗ, ಕಿಟೆಲ್ಲರು ತುಬಿಂಜೆನ್ ಎಂಬಲ್ಲಿ ವಾಸವಾಗಿದ್ದರು. ಅಲ್ಲಿಂದಲೇ, ಸುದೀರ್ಘವೂ, ವಿದ್ವತ್ಪೂರ್ಣವೂ ಆದ ಮುನ್ನುಡಿಯನ್ನು ಬರೆದು ಕಳಿಸಿದರು. ಐದು ವರ್ಷಗಳಿಂದ ನಡೆದಿದ್ದ ಮುದ್ರಣವು ಕೊನೆಗೊಮ್ಮೆ ಮುಗಿದು, ಗ್ರಂಥವು ಹೊರಬಂದಿತು.

ಇನ್ನೀಗ, ಈ ಕೋಶದಲ್ಲಿ ಬಂದ ಒಂದು ಶಬ್ದಾರ್ಥದ ಮಾದರಿಯನ್ನು ಕೊಡುತ್ತೇವೆ.

"ಬಿತ್ತು" (ಶಬ್ದಾರ್ಥದ ಮಾದರಿ ಮುಂದಿನ ಪುಟದಲ್ಲಿದೆ)

'ಬಿತ್ತು' ಶಬ್ದಕ್ಕೆ ಇಲ್ಲಿ ಕಿಟೆಲ್ಲರು ಮೂರು ಬೇರೆ ಬೇರೆ ಅರ್ಥಗಳನ್ನು ಕೊಟ್ಟಿದ್ದಾರೆ. ಮೊದಲಿಗೆ ಶಬ್ದದ ಅರ್ಥವನ್ನು ಇಂಗ್ಲಿಷಿನಲ್ಲಿ ಕಾಣಬಹುದು. ಆಮೇಲೆ ಅದರ ಹುಟ್ಟು ಎಲ್ಲಿಯದು ಎಂಬುದನ್ನು ಕೊಟ್ಟಿದ್ದಾರೆ. (Te–ತೆಲುಗು, T–ತಮಿಳು) ಯಾವ ಕನ್ನಡ ಕಾವ್ಯಗಳಲ್ಲಿ, ಅಥವಾ ಪ್ರದೇಶದಲ್ಲಿ ಅದು ಬಳಕೆಯಾಗಿದೆ ಎಂಬುದರ ಉಲ್ಲೇಖವಿದೆ (Bp–ಬಸವ ಪುರಾಣ, Bh–ಕುಮಾರ ವ್ಯಾಸಭಾರತ, Dh–ಧಾರವಾಡ ಪ್ರದೇಶ ಇ.) ಈ ಶಬ್ದವು ಬಂದ ಪ್ರಯೋಗ ವಾಕ್ಯಗಳನ್ನೂ ಗಾದೆ ಮಾತುಗಳನ್ನೂ ಕಿಟೆಲ್ಲರು ಕೊಟ್ಟಿದ್ದಾರೆ. ಇಂತು ಆ ಶಬ್ದದ ಬಗ್ಗೆ ಹೇಳಬೇಕಾದ ಏನನ್ನೂ ಅವರು ಉಳಿಸಿಲ್ಲ !

'ಓಲೆ' ಎಂಬ ಇನ್ನೊಂದು ಶಬ್ದ. ಶಾಲೆ ಕಲಿಯುವಾಗ ನೀವು ಉಪಯೋಗಿಸುವ ನಿಘಂಟುವಿನಲ್ಲಿ ಈ ಶಬ್ದಕ್ಕೆ ಒಂದೆರಡು

**ಬಿತ್ತು**, bittu 1. To put seeds, to sow (ಬೀಜಸ್ಥಾಪನ Śmd. Dh. C., Tē. ಎತ್ತು, T. ಎತ್ತು, ಎಡ್ಡ್ಯ, ಎರ್ರ್ಯ; M. ಎಡ, ಎರ, cf. ಬಿದೆ 1). ಕಸಟುಂ ಸೋದಿಸದೆ ಬಿತ್ತಿದೊಕ್ಕಲಿಗನ ಪೊಲ್ (Śmd. 267). ಕಣ್ಣುಗ ಬೀಜ. ಬಿತ್ತುವ ಕೆಯಿ (ಖಾರೀಕ Nr.). ಬಿತ್ತಿದ ಕಯ್ಯು ಕಿತ್ತರೆ ಆದೀತೇ? — ಬಿತ್ತಿದ ಬೀಜಕ್ಕೆ ಸತ್ತಿಗೆ [illegible] ಹಾಗೆ. — ಬಿತ್ತಲಿಲ್ಲ; ಬೆಳೆಯಲಿಲ್ಲ, ಎತ್ತರಾಗಿನ್ದ ಬಸ್ದಿಯೋ, ಹಕ್ಕರಾಜ? — ಬಿತ್ತುವಾಗ ಮಲಗಿದರೆ [illegible]ಯ್ಯುವಾಗ ಹಗುರವಾಯಿತು. — ಅಂಗಲಾಗಿ ಬಿತ್ತಿದ್ದು ಅಗಲವಾಗಿ ಏಳುವದು. — ಉತ್ತು ಬಿತ್ತಿದ ಬತ್ತವಾದರೂ ಮಟ್ಟಿಯಿಲ್ಲದೆ ರೋಳೆಯದು (Prvs.). See Ŏpr. 8, after 44; Bp. 3. 75: 26, 35; 38, 42; 60, 17. 19. 50; Bh. 1, 8, 37; J. 11, 14; Śi. 301. 307. 396; B. 4, 26.

**ಬಿತ್ತು**, bittu. 2 = ಬಿತ್ತ, ಬಿಜ್ಜು. Seed, a seed (ಬೀಜ Śmd. Dh., My.; T. ಎತ್ತು, ಎಡ್ಡ್ಯ, ಎರ್ರ್ಯ; [illegible] ಎದೆ, ಎರೆ; Tĕ. ಎತ್ತು, ಎತ್ತನ; [illegible] ಬೆದೆ 1). ನುಗ್ಗಿಯ ಬಿತ್ತು (ಶಿಗ್ರುಬೀಜ Nr.). See Śmd 112. 188; Grj. 8, after 69; 4, 97; Bp. 26. 25; 30, 1; 40. 62; 60, 17; Śiv. 1, after 81.

**ಬಿತ್ತು**, bittu. 3. Third person singular of the imperfect of ಬೀಳು 1.

ಅರ್ಥವನ್ನು ಕೊಟ್ಟು ಅಲ್ಲಿಗೆ ಮುಗಿಸಿದ್ದಾರೆ. ಆದರೆ ಕಿಟೆಲ್ಲರು ಆ ಶಬ್ದದ ಬಗ್ಗೆ ಏನೆಲ್ಲ ಹೇಳಿದ್ದಾರೆಂಬುದನ್ನು ಹಿಂದಿನ ಪುಟದ ಚಿತ್ರದಲ್ಲಿ ನೋಡಬಹುದು.

ಕಿಟೆಲ್ಲರಿಗೆ ಈ ಮಹಾಕಾರ್ಯವನ್ನು ಒಪ್ಪಿಸಿದವರು ಬಾಸೆಲ್ ಮಿಶನ್ನಿನವರಾದರೂ, ಇದರಲ್ಲಿ ಭಾರತ ಸರಕಾರವೂ ಆಸ್ಥೆ ವಹಿಸಿತ್ತು. ಆಗಿನ ಮೈಸೂರು, ಹೈದರಾಬಾದ ಸಂಸ್ಥಾನಗಳೂ ಇದರ ಪ್ರಕಟನೆಯಲ್ಲಿ ಪಾಲುಗೊಂಡಿದ್ದುವು. ಕೇಂದ್ರ ಸರಕಾರದ ಆದೇಶದ ಮೇರೆಗೆ ಮುಂಬಯಿ, ಮದ್ರಾಸ್ ಸರಕಾರಗಳು ಈ ಕೋಶದ ನೂರಾರು ಪ್ರತಿಗಳನ್ನು ತರಿಸಿಕೊಂಡು ಶಿಕ್ಷಣ ಸಂಸ್ಥೆಗಳಿಗೆ ಮತ್ತು ವಿವಿಧ ಕಚೇರಿಗಳಿಗೆ ಒದಗಿಸಿದರು.

ಕನ್ನಡಿಗರಂತೂ ಸರಿಯೆ. ಕನ್ನಡೇತರರ ಗಮನವನ್ನು ಸಹ ಇದು ಸೆಳೆಯಿತು. ಅವರಿಂದ ತುಂಬಾ ಹೊಗಳಿಸಿಕೊಂಡಿತು.

ಓಲೆ ōlĕ. = ಪಾಲೆ. A leaf of a palmyra-tree, especially one of the talipot or fan-palm Corypha umbraculifera Lin., a cadjan leaf used to write on with an iron style (ಪತ್ರ Mr. 359; C., M., Tu.; T. ಓಲೈ). 2, a coil of palmyra leaf occasionally worn as an ornament in the lobe of a female's ear (Tu.; My. = ಬಿಚ್ಚೋಲೆ). 3, an ear-ring of gold, etc. worn in the lobe of the ear of a female whose husband is alive (C.). 4, an umbrella-shaped awning over a cart (S. Mhr.). ಕಿವಿಯ ಓಲೆ (ತಾಡಕ, ತಾಲಕ, ತಾಲಪತ್ರ, ಕರ್ಣಿಕೆ Hlâ., Nr.). ಕರ್ಣದ ಓಲೆ (ತಾಲಕ, ತಾಲಪತ್ರ Mr. 337). ಕಿವಿಗೆ ಇಟ್ಟು ಕೊಳ್ಳುವ ಓಲೆ (ಕರ್ಣಿಕೆ Sl. 218). ಓಲೆಗಳ ಪಾಟ್ಟವಂ (ಪತ್ರಿಕ Mr. 377). ಬರೆಯದ ಓಲೆ (ಅಲೇಖ Nn. 96). ತಾಳೇ ಓಲೇ ಮರ, the palm Borassus flabelliformis Lin. (ತಾಲ Si. 166). ಧೀತಿಯಿಂ ನಿಶಾಸ್ವ್ವರಿಣಿ ಜೋಗೆ ಬಿದ್ದ ಕಿವಿಯ ಓಲೆಯ ಮೌಕ್ತಿಕಪತ್ರವೋ? (Lilv. 3, 4). ಯುವರಸವನ್ ಊಡಿದ ನಿಗ್ಗವದ ಬಳೆಗಳ, ಓಲೆಗಳ ಮಿಣ್ಡೆವಣ್ಡೆ ತಿಯುರ್ (Râghô. 17, 65) ಮೂಱು ದಿನದ ದಾಟ್ವಿಗೆ ಆಱು ಜೋಡು ಓಲೆ (Prv.). See ಬಿಚ್ಚೋಲೆ, ಕುತ್ತೋಲೆ, etc.; Grj. 10, 40; Bp. 5, 52; 11, 43; 14, 4; 50, 36; 53, 16. 17; Rsv 5, 110; Prv. s. ಮುಣ್ಡೆ. — ಓಲೆಚಣ್ಡಿ s. A coil of written palm leaf (My.). — ಓಲೆಚಳತುಮ್ಬು. An ōlĕ ear-ring to which a ċaḷatumbu is attached (C.). — ಓಲೆಚಮಿಕಿ = ಓಲೆಚಳತುಮ್ಬು. (My.). — ಓಲೆತಿರಗಣಿ. The screw of an ear-ring (C.). — ಓಲೆತಿರುಪ್ಪು = ಓಲೆತಿರಗಣಿ. (My.). — ಓಲೆಪುಸ್ತಕ. A book of cadjan leaves (C.). — ಓಲೆಯ ಗಿಡ. The palmyra tree, Borassus flabelliformis Lin. (ತಾಲ Si. 166), the leaves of which are at present also used for making writing-leaves (My.). — ಓಲೆಭಾಗ್ಯ. The good fortune of a female to wear an ōlĕ as a sign of her husband being still alive (My.). — ಓಲೆಯ ಮರ. (Ç. Bp. 47, 45). The talipot palm; the palmyra tree (My.). — ಓಲೆಸರಪಣಿ. An ear-ring to which a small ornamental chain is attached (My.).

ಆಗಿನ ಕಾಲದ ವಿದ್ವಾಂಸರೆನಿಸಿದ ಬಿ. ಎಲ್. ರೈಸ್, ಜೆ. ಎಫ್. ಫ್ಲೀಟ್, ಹಲ್ಷ್ ಮುಂತಾದವರು ಕಿಟೆಲ್ಲರ ಈ ಗ್ರಂಥ ಸಾಹಸವನ್ನು ಕೊಂಡಾಡಿ ಪತ್ರಿಕೆಗಳಲ್ಲಿ ಲೇಖ ಬರೆದರು. "ಇಷ್ಟು ಖಚಿತವೂ ಶಾಸ್ತ್ರೀಯವೂ ನಿಯಮಬದ್ಧವೂ ಆದ ನಿಘಂಟು ಭರತಖಂಡದ ಯಾವ ದೇಶಭಾಷೆಗೂ ಇಲ್ಲ" ಎಂಬುದು ಅವರ ಅಭಿಪ್ರಾಯವಾಗಿದ್ದಿತು.

ಕಿಟೆಲ್ಲರು ಆಗ ತುಬಿಂಜೆನ್‌ನಲ್ಲಿ ಇದ್ದರಷ್ಟೆ. ಅಲ್ಲಿಯ ವಿಶ್ವವಿದ್ಯಾನಿಲಯವು ಕಿಟೆಲ್ಲರಿಗೆ ಗೌರವ ಡಾಕ್ಟರೇಟ್ ಪದವಿಯನ್ನು ಕೊಡಬೇಕೆಂದು ನಿರ್ಧರಿಸಿತು. ದಿನಾಂಕ ೬-೬-೧೮೯೬ ರಂದು ಈ ಪದವೀದಾನ ಸಮಾರಂಭ ನಡೆಯಿತು. ಕನ್ನಡದ ಕೆಲಸಕ್ಕಾಗಿ ಸಂದ ಮೊತ್ತ ಮೊದಲನೆಯ ಡಾಕ್ಟರೇಟ್ ಪದವಿಯಿದು ! ಅಲ್ಲದೆ ಅದನ್ನು ದಯಪಾಲಿಸಿದವರು ವಿದೇಶೀ ವಿಶ್ವವಿದ್ಯಾನಿಲಯದವರೆಂದರೆ ಯಾವ ಕನ್ನಡಿಗನಿಗೆ ಅಭಿಮಾನ ಉಕ್ಕಿಬರಲಾರದು ! ಇದು ಜರ್ಮನ್ ಕನ್ನಡ ಭಾಷೆಗಳ ಬಾಂಧವ್ಯದ ಪ್ರತೀಕ.

ಈ ಮಹಾಗೌರವ ಸಂದಾಗ ಕಿಟೆಲ್ಲರಿಗೆ ೬೫ ವರುಷ. ಕಣ್ಣಿನ ನಿಶ್ಶಕ್ತಿಯಿಂದಾಗಿ ಹೆಚ್ಚು ಕೆಲಸ ಮಾಡಲಾಗುತ್ತಿದ್ದಿಲ್ಲ. ಆದರೆ ಅವರು ಸುಮ್ಮನೆ ಕುಳ್ಳಿರುವವರಲ್ಲ. ಜರ್ಮನ್ ಪತ್ರಿಕೆಗಳಿಗೆ ಆಗೀಗ ಲೇಖನ ಬರೆಯುತ್ತಿದ್ದರು. ಕನ್ನಡ ಬೈಬಲಿನ ಸುಧಾರಣೆಯ ಸೂಚನೆಗಳನ್ನು ವಿವರವಾಗಿ ಬರೆದು, ಮಂಗಳೂರಿಗೆ ಕಳಿಸಿಕೊಟ್ಟರು.

ಮೇಲೆ ಹೇಳಿದ ಫ್ಲೀಟ್ ಎಂಬ ವಿದ್ವಾಂಸರು, ಕನ್ನಡ ಕೋಶದ ಬಗ್ಗೆ ಬರೆಯುತ್ತ "ಕಿಟೆಲ್ಲರು ಇದರಂತೆಯೇ ಕನ್ನಡ ವ್ಯಾಕರಣ ಗ್ರಂಥವನ್ನೂ ಏಕೆ ಬರೆಯಬಾರದು ?" ಎಂದು ಅಂದಿದ್ದರು. ಕಿಟೆಲ್ಲರು ಆ ಕೆಲಸವನ್ನೀಗ ಕೈಗೆತ್ತಿಕೊಂಡರು.

# A GRAMMAR

OF THE

# KANNADA LANGUAGE

IN ENGLISH

COMPRISING THE THREE DIALECTS OF THE LANGUAGE

(ANCIENT, MEDIEVAL AND MODERN)

BY

THE REV. DR. F. KITTEL



MANGALORE

BASEL MISSION BOOK AND TRACT DEPOSITORY

1903



ತಮ್ಮ 'ವಿಶ್ರಾಂತಿ'ಯ ಆ ದಿನಗಳನ್ನು, ವ್ಯಾಕರಣ ರಚನೆಯಲ್ಲಿ ಕಳೆಯತೊಡಗಿದರು. ಹಳಗನ್ನಡ ವ್ಯಾಕರಣ ಗ್ರಂಥವಾದ 'ಶಬ್ದ ಮಣಿದರ್ಪಣ'ವನ್ನು ತಳಹದಿಯಾಗಿಟ್ಟುಕೊಂಡರು. ಕನ್ನಡ ಶಬ್ದ, ವಾಕ್ಯಗಳ ಬೇರೆ ಬೇರೆ ರೂಪಗಳು ಹಳಗನ್ನಡ, ನಡುಗನ್ನಡ ಮತ್ತು ಹೊಸಗನ್ನಡ–ಈ ಮೂರು ಅವಸ್ಥೆಗಳಲ್ಲಿ ಆದೆಂತು ಸಾಗಿಬಂದಿವೆಯೆಂಬುದನ್ನು ವಿವರಿಸಿದರು. ಯಥಾಪ್ರಕಾರ ತಮಿಳು, ತೆಲುಗು, ಮಲೆಯಾಳ ವ್ಯಾಕರಣಗಳ ಹೋಲಿಕೆಯನ್ನು ಕೊಟ್ಟರು. ಈ ಬಗೆಯ ವ್ಯಾಕರಣ ಗ್ರಂಥವು ಇವತ್ತಿಗೂ ಬೇರೊಂದಿಲ್ಲವೆಂಬಂತೆ ಆದು ಸಿದ್ಧವಾಯಿತು.

ಇಂಗ್ಲಿಷಿನಲ್ಲಿ ಬರೆಯಲಾದ ಈ ಕೃತಿಯು ಮಂಗಳೂರಲ್ಲಿಯ ಬಾಸೆಲ್ ಮಿಶನ್ನಿನ ಪ್ರೆಸ್ಸಿನಲ್ಲಿಯೇ ಮುದ್ರಣಗೊಳ್ಳುತ್ತಿತ್ತು.

ಕಿಟೆಲ್ಲರು ತುಬಿಂಜೆನ್‌ನಲ್ಲಿ ಇದ್ದುದರಿಂದ, ಒಂದು ಮುದ್ರಿತ ಪ್ರತಿಯನ್ನು ಅವರಿದ್ದಲ್ಲಿಯೇ ಹಡಗಿನ ಮೂಲಕ ಕಳುಹಿಸಿಕೊಡಲಾಯಿತು. ದಿನಾಂಕ ೧೮-೩-೧೯೦೩ರಂದು ಅದು ಅವರಿಗೆ ತಲುಪಿತು. ಆಗ ಸಂಜೆಯ ಸಮಯ. ಮನೆಯಲ್ಲಿ ಮಡದಿ ಜ್ಯೂಲಿ, ನಾಲ್ವರು ಮಕ್ಕಳು, ಮೊಮ್ಮಕ್ಕಳು—ಈ ಪರಿವಾರವು ಆ ಪುಸ್ತಕವನ್ನು ನೋಡಿ ಸಂತೋಷಪಟ್ಟಿತು.

ಮರುದಿನ ಕಿಟೆಲ್ಲರು ಎಂದಿನಂತೆ ಸಂಜೆಯ ವಾಯು ವಿಹಾರಕ್ಕೆ ಹೋಗಿಬಂದರು. ಶರೀರದಲ್ಲಿ ಅಸ್ವಾಸ್ಥ್ಯ ತಲೆದೋರಿತು. ಕೆಲವೇ ಗಂಟೆಗಳಲ್ಲಿ ಅವರು ಅಸುವನ್ನು ನೀಗಿದರು. ಚಿರಶಾಂತಿಯನ್ನು ಹೊಂದಿದರು.

ಕನ್ನಡವನ್ನು ಪುನರುಜ್ಜೀವಿಸಲೆಂದು ದೇವರು ಕಿಟೆಲ್ಲರಿಗೆ ಆಜ್ಞೆಯಿತ್ತು ನಮ್ಮ ನಾಡಿಗೆ ಕಳಿಸಿಕೊಟ್ಟನೆನ್ನಬೇಕು. ಅವರು ತರುಣ ವಯಸ್ಸಿನಲ್ಲಿಯೆ ಇಲ್ಲಿಗೆ ಬಂದು ೪೦ ವರ್ಷಗಳ ಕಾಲ ಕನ್ನಡ ಕೆಲಸವನ್ನು ಮಾಡಿದರಲ್ಲವೆ. ತಾವು ವಹಿಸಿಕೊಂಡಿದ್ದ ಕಾರ್ಯವು ಮುಗಿಯಿತೆಂಬ ಸಂತೃಪ್ತ ಭಾವವು ಅವರಲ್ಲಿ ಮೂಡಿದ್ದಿರಬೇಕು. ಅದೂ ಕೂಡ ದೇವರ ಸೇವೆ ಎಂದೇ ಅವರು ಭಾವಿಸಿದ್ದರು. ಅವರು ತೀರಿಕೊಂಡು ಇಂದಿಗೆ ೭೦ ವರ್ಷಗಳು ಸಂದಿವೆ. ಇಷ್ಟು ಕಾಲ ಸಂದ ಮೇಲೆ ತುಬಿಂಜೆನ್‌ನಲ್ಲಿ ಅವರನ್ನು ಅದಾರು ನೆನಪಿಸಿಕೊಂಡಾರು ? ಆದರೆ ಓದುಬಲ್ಲ ಪ್ರತಿಯೊಬ್ಬ ಕನ್ನಡಿಗನ ಮನೆಯಲ್ಲಿ, ಮನದಲ್ಲಿ ಮಾತ್ರ ಅವರು ಚಿರಸ್ಥಾಯಿಯಾಗಿದ್ದಾರೆ.



